# ಅ ರ್ಪ ಣ



ನನ್ನ

ಸ್ವರ್ಗೀಯ ತಾಯಿಗೆ—

# ಅ ರಿ ಕೆ

ನನ್ನೀ ' ಸೆರೆಯಾಳು ' ಖಂಡಕಾವ್ಯ ರಚಿತವಾಗಿ ಐದು ವರ್ಷಗಳು ಸಂದವು. ' ಪ್ರಬುದ್ಧ ಕರ್ನಾಟಕ ' ದ ಸಂಪಾದಕರು ನಾಲ್ಕು ವರ್ಷಗಳ ಹಿಂದೆಯೆ ಈ ಕಾವ್ಯದ ಮೊದಲ ಭಾಗ ' ಶುಕ್ಲಪಕ್ಷ ' ವನ್ನು ಪ್ರಕಟಿಸಿ ಪ್ರೋತ್ಸಾಹಿಸಿದರು. ಈಗ ಕವಿಕಾವ್ಯಪಕ್ಷಪಾತಿಗಳಾದ ಗೆ. ಘಾಣೇಕರರವರು ಒಟ್ಟು ಕಾವ್ಯವನ್ನು ತಮ್ಮ ಮಾಲೆಯ ಬಿಡಿಮುತ್ತಾಗಿ ಬೆಳಕಿಗೆ ತರುವ ಉಪಕಾರವನ್ನು ಕೈಕೊಂಡಿದ್ದಾರೆ. ಇಂಥ ಸಂದರ್ಭದಲ್ಲಿ ಕಾವ್ಯದ ಸಂವಿಧಾನಕ, ಕಥೆಯ ಹಂದರ ಹಾಗು ಇತರ ಕೆಲ ವಿಚಾರಗಳನ್ನು ಅರಿಕೆಯ ರೂಪವಾಗಿ ಹೇಳುವುದು ಅಪ್ರಸ್ತುತವೆನಿಸದು ಎಂದು ನನ್ನ ಭಾವನೆ.

' ಬನದ ಹುಣ್ಣಿವೆಯಿರುಳ ಬನವಾಸಿ ಬನದೊಳಗೆ ' ನ ರಮಣೀಯ ಆವರಣದತ್ತ ಕವಿಯು ರಸಿಕ-ಓದುಗ-ನನ್ನು ಕರತರುವನು. ಇಲ್ಲಿನ ವಿವರಣವನ್ನು ಕೊಡುವಾಗಲೆ ಕವಿಗೆ ಇನ್ನೊಂದು ಕೆಲದಲ್ಲಿ ಇದ್ದ ಕತ್ತಲೆಯ, ಅಲ್ಲಿಯ ಕಲ್ಲ ಸೆರೆಮನೆಯ, ಆ ಸೆರೆಮನೆಯಲ್ಲಿ ನಡೆದ ಜೀವನದ ಹೋರಾಟದ ಪರಿಜ್ಞಾನವಾಗುವುದು. ತಿರೆಯ ಬದುಕಿನಲ್ಲಿ ಒಂದೆಡೆ ಹಗಲು ಇನ್ನೊಂದೆಡೆ ಇರುಳು ಇರುವುದು ಸ್ವಭಾವನಿಯಮವೆಂದು ಹೇಳಿ ರಸಿಕನೊಂದಿಗೆ ಕತ್ತಲೆಯ ಭಾಗದತ್ತ ಆಗಮಿಸುತ್ತಾನೆ. ಅವರಿಬ್ಬರು ಕಾರಾಗೃಹದ ಆಗಸೆಬಾಗಿಲಿಗೆ ಬರುವುದೇ ತಡ, ಸಿಪಾಯರ ಗೊರಕೆ, ಕಣ್ಣುಕಪ್ಪಡೆಗಳ ಕಿರುಚಾಟದ ಹಿನ್ನೆಲದ ಶೃತಿಯೊಂದಿಗೆ ನೋವೆ ರಸಸ್ರೋತ ತಾಳಿದ ಗೀತವೊಂದು ಕೇಳಬರುವುದು. ಸರಿರಾತ್ರಿಯಿಂದ ಬೆಳಗಿನ ವರೆಗೆ ಅವರಿಬ್ಬರೂ ಆ ಗೀತೆಯನ್ನು ಕೇಳಿಕೊಳ್ಳುವರು. ಕಥೆ ಮುಗಿದಾಗ ಕವಿಯು ದುಃಖದ ತಂದ್ರಿಯಲ್ಲಿದ್ದ ರಸಿಕನನ್ನು ಎಚ್ಚರುಗೊಳಿಸಿ ತಾವು ಕೇಳಿದ ಈ ಹಾಡನ್ನು ಮನೆಮನೆಗೆ ತಲ್ಪಿಸೋಣವೆಂದು ಹೇಳಿ ಅಲ್ಲಿಂದ ಇಬ್ಬರೂ ಮರಳುತ್ತಾರೆ.... ಈ ಸಂವಿಧಾನಕವನ್ನು ಕಲ್ಪಿಸುವಾಗ ವಿಶೇಷವಾಗಿ ಸಂಕೇತಾರ್ಥದ ಕಡೆಗೆ ಗಮನ ಕೊಟ್ಟಿದೆಯೆ ಹೊರತು ಯಥಾರ್ಥ ಸಂಗತಿಗಳಿಗೆ ಅಷ್ಟು ಕಟ್ಟುಬಿದ್ದಿಲ್ಲ. ಇಲ್ಲಿಯ ಬೆಳಕು ಕತ್ತಲೆಗಳ ಆವರಣಗಳು ಇಡಿ ಕಾವ್ಯದ ಶುಕ್ಲಪಕ್ಷ-ಕೃಷ್ಣಪಕ್ಷಗಳನ್ನು ಸೂಚಿಸುವದರೊಂದಿಗೆ ಮುಂದಣ ಕಥಾನಕದ ಧ್ವನಿಯನ್ನು ವ್ಯಕ್ತಪಡಿಸು

ವವು; ಅಲ್ಲದೆ, ಶುಕ್ಲಪಕ್ಷ-ಕೃಷ್ಣಪಕ್ಷಗಳು ಕ್ರಮವಾಗಿ ಕಾವ್ಯನಾಯಕನ ಜೀವನದಲ್ಲಿಯ, ಪ್ರಾಯಕ್ಕೆ ಬರುವ ಪೂರ್ವದ ಸುಮಾರು ಹದಿನೈದು-ಹದಿನಾರು ವರುಷಗಳ ಆಹ್ಲಾದದಿಂದೊಡಗೂಡಿದ ಜೀವನವನ್ನೂ ಹಾಗೂ ಹರೆಯಕ್ಕೆ ಬಂದ ಬಳಿಕ ಆತನು ಬಾಳಿನಲ್ಲಿ ನಡೆಸಿದ ಕಠಿಣ ಹೋರಾಟವನ್ನೂ ನಿರ್ದೇಶಿಸುವವೆಂದು ನನ್ನ ತಿಳುವಳಿಕೆ.

ಮುಖ್ಯ ಕಥೆ ಸುಮಾರು ಕ್ರಿ. ಶ. ೧೯೩೦ ನೆಯ ವರುಷದ ಎಡಬಲದ ಕಾಲಗಳಲ್ಲಿ ನಡೆದಂತೆ ಪರಿಭಾವಿಸಲಾಗಿದೆ. ಒಂದು ಬೆಳಗಿನಲ್ಲಿ ಮರಣಶಿಕ್ಷೆಯನ್ನನುಭವಿಸಲಿರುವ ತರುಣ ಸೆರೆಯಾಳು—ಚೆನ್ನನು ಹಿಂದಣ ರಾತ್ರಿ ಜೊತೆ ಬಂದಿಗಳಿಗೆ ತನ್ನ ಆತ್ಮಕಥನವನ್ನು ಹೇಳಲು ತೊಡಗುವನು. 'ಶುಕ್ಲಪಕ್ಷ' ದಲ್ಲಿ ನಾಯಕನು ಅನುಭವಿಸಿದ ನೇರವಾದ ಘಟನೆಗಳಿಗಿಂತ ಆತನು ಯಾವ ಸಂಸ್ಕೃತಿಯ ಸೊಗಸಿನ ಜೀವನದ ಹಿನ್ನೆಲೆಯಲ್ಲಿ ಬೆಳೆದುಬಂದಿರುವನೆಂಬುದನ್ನು ಬೇರೊಂದು ವಿಧಾನದಿಂದ ತೋರಿಸಲು ಯತ್ನಿಸಿದೆ. ಈ ಮೂಲಕ ಎಳೆಯ ಚೆನ್ನ, ಅವನ ತಂದೆ ಮಧುರ, ತಾಯಿ ಶ್ಯಾಮಲೆ, ತಂಗಿ ಲಲಿತೆ ಹಾಗು ನೆರೆ ಮನೆಯ ಹುಡಗಿ ನೀಲೆಯರ ಪರಿಚಯವು ಓದುಗನಿಗೆ ಆಗುವುದು. ಕೃಷ್ಣ ಪಕ್ಷ ಪ್ರಾರಂಭವಾಗುವುದೇ ತಡ, ವರ್ಣನೆಯ ಆವರಣ-ಆಭರಣ-ವು ಸರಿದು ಕಥೆಯ ನೇರವಾದ ಘಟನೆಗಳು, ಕಥಾಪುರುಷನ ಮನದ ಮಿಡಿತಗಳು ಜೀವ ಧಾರಣ ತಾಳಿ ಕಣ್ಣೆದುರು ಬರುವವು. ಮೊದಲು ಪರಿಚಿತರಾದ ವ್ಯಕ್ತಿಗಳ ವಿಚಾರ ಅಲ್ಲಲ್ಲಿ ಬರುವದರೊಂದಿಗೆ ಒಂದೆರಡು ಹೊಸ ಜನಗಳ ಬಳಕೆಯೂ ಓದುಗನಿಗಾಗುವುದು. ಶುಕ್ಲಪಕ್ಷವು ಹೋಳಿಹುಣ್ಣಿವೆಯ ರಸರಾತ್ರಿಯಲ್ಲಿ ಪರಿಸಮಾಪ್ತಿಗೊಳ್ಳುತ್ತಿದ್ದರೆ, ಕೃಷ್ಣಪಕ್ಷವು ಅಮಾವಾಸ್ಯೆಯ ಅಂಧಃಕಾರ ವನ್ನು ದಾಟಿ ಪ್ರತಿಪದೆಯ ಅರುಣೋದಯದ ಮಂಗಲಸೂಚನೆಯೊಂದಿಗೆ ಮುಕ್ತಾಯವಾಗುವುದು. ಆತ್ಮಹತ್ಯೆಗೆ ತೊಡಗಿದ ಚೆನ್ನನು ಅದರ ವಿಚಾರ ವನ್ನು ಬಿಟ್ಟುಕೊಟ್ಟು ಹೊಸ ಉತ್ಸಾಹವೊಂದನ್ನು ತುಂಬಿಕೊಂಡು, ಕಾಣದ ಯಾವುದೊ ಶಕ್ತಿಯು ತನ್ನನ್ನು ಆಟವಾಡಿಸುವದೆಂದು ಭಾವಿಸಿಕೊಂಡು, ಆ ಶಕ್ತಿಯ ಅನುಜ್ಞೆಯೆ ಎಂದು ತಿಳಿದು ಕ್ರಾಂತಿಯ ಕೊಡಲೆ ಮಸೆಯಲು ತೊಡ ಗುತ್ತಾನೆ. ಈ ಕಾರಣ ಆತನು ಮರಣದಂಡನೆಯನ್ನು ಅನುಭವಿಸಬೇಕಾ ಗುವುದು.

ಮಾನವನ ಜೀವನ ಪ್ರಯಾಣದಲ್ಲಿ ಮೇಲಿಂದ ಮೇಲೆ ಎದುರುಬರುವ ತೊಡಕು ಘರ್ಷಣೆಗಳಿಂದ ಪಾರಾಗಲು ಆತ್ಮಹತ್ಯೆ ಅಥವಾ ಸಿಡಿದೇಳುವ ಕ್ರಾಂತಿಯೇ ಚರಮೋಪಾಯವೆ? ಜೀವಿಗೆ ಇದರಿಂದ ಮುಕ್ತಿಯೆಂತು? ಎಂಬಿತ್ಯಾದಿ ಸಮಸ್ಯೆಗಳಿಗೆ ಪರಿಹಾರ ಸೂಚಿಸುವ ಉದ್ದೇಶ ಅಥವಾ ಅರ್ಹತೆ ಈ ಗ್ರಂಥಕಾರನದಲ್ಲ. ಚೆನ್ನನ ಪರಿಸರದಲ್ಲಿ ಬೆಳೆದ ಭಾವಪ್ರಧಾನಿಯೊಬ್ಬ–ತುಸ ಅಸ್ಥಿರಚಿತ್ತನೂ ಇರಬಹುದು–ತನಗೊದಗಿದ ಆಘಾತಗಳಿಗೆ ಪ್ರತಿಯಾಗಿ ಹೇಗೆ ದೈವವಾದಿಯಾಗುತ್ತಿದ್ದಾನೆ–ಎಂಬುದರ ವಿವರಣೆ ವಿಶ್ಲೇಷಣೆಗಳು ಇಲ್ಲಿಯ ಕಾವ್ಯಹೇತುಗಳಾಗಿವೆ. ಆತ್ಮಹತ್ಯೆ ಇಲ್ಲವೆ ಕ್ರಾಂತಿಯ ಉದ್ದೀಪನೆಗಳು ಚೆನ್ನನ ಭಾವೋದ್ರೇಕಗೊಂಡ ಮನಸ್ಸಿನ ಪ್ರತಿಕ್ರಿಯೆಗಳಿರಬಹುದು; ಅವುಗಳ ವಿಚಾರ ಇಲ್ಲಿ ಗೌಣ. ಅದರಂತೆ ಕಾವ್ಯನಾಯಕನ ಕಾರಾಗೃಹವಾಸದ ಕಥೆಯೂ ಗೌಣವೆ. ಆದರೆ, ಚೆನ್ನನ ಬುದ್ಧಿ, ಭಾವ, ಶ್ರದ್ಧೆ-ಸಂಸ್ಕಾರಗಳುಳ್ಳವರಿಗೆ, ಅವನಂತೆಯೆ, ಮಾನವನು ಈ ಜಗದ ಸೆರೆಮನೆಯಲ್ಲಿ ಬಂಧಿತನಂತಿದ್ದಾನೆ, ಸೆರೆಮನೆಯ ಒಡೆಯನ ನಿರ್ದೇಶನದ ಮೇರೆಗೆ ಜೀವನದಲ್ಲಿ ಚಲನವಲನಗಳು ನಡೆಯುವವು ಎಂದು ತೀವಾಗುತ್ತದೆ ಎಂಬುದು ಪ್ರಧಾನ ವಿಷಯ. ಅಥವಾ ಸಕಲ ಜನರಲ್ಲಿಯೂ ಈ ವಿಚಾರಾಂಶ ಸುಪ್ತವಾಗಿ ಮನೆ ಮಾಡಿಲ್ಲವೆಂದು ಹೇಳುವುದು ಹೇಗೆ?

ಈ ಕಾವ್ಯವನ್ನು ಬರೆಯುವ ಸಂದರ್ಭದಲ್ಲಿ ಹಲ ಕೆಲ ಪ್ರಾಚೀನ ಅರ್ವಾಚೀನ ಕವಿಗಳಿಗೆ, ವಿಚಾರಾಂಶಗಳಿಗೆ ಒಂದಲ್ಲೊಂದು ರೀತಿಯಲ್ಲಿ ನಾನು ಋಣಿಯಾಗಿದ್ದೇನೆ. ಶುಕ್ಲಪಕ್ಷವು ಕಾಲಿದಾಸನ ಮೇಘದೂತ, ಋತುಸಂಹಾರ ಹಾಗು ಬೇಂದ್ರೆಯವರ ಸಖೀಗೀತಗಳಿಂದ ಕೆಲಮಟ್ಟಿಗೆ ಸ್ಫೂರ್ತಿ ಪಡೆದಿದೆ. ಕೃಷ್ಣಪಕ್ಷದ ಮನೋವಿಶ್ಲೇಷಣೆಯ ವಿವರಣೆ, ಸನ್ನಿವೇಶನಿರ್ಮಾಪನ ಹಾಗೂ ಸ್ವಪ್ನಚಮತ್ಕೃತಿಗಳು ಆಂಗ್ಲಸಾಹಿತ್ಯಾಭ್ಯಾಸದ ಪ್ರಭಾವಕ್ಕೆ ತುಸ ಒಳಗಾಗಿರಬಹುದು. ಜನತೆಯ ಸೊತ್ತಾದ ಕೆಲ ಅನುಭವದ ಮಾತು, ಜಾಣ್ನುಡಿ ಪಡೆನುಡಿಗಳು ಇಲ್ಲಿ ಸಹಜವಾಗಿ ಬಳಕೆ ಕಂಡಿವೆ. ಅಲ್ಲಲ್ಲಿ ಕೆಲ ಹಿರಿಯ ಕವಿಗಳ ಕಾವ್ಯಗಳ ಆಕರಗಳನ್ನು ಉಪಯೋಗಿಸಿದೆ. ಈ ಎಲ್ಲರಿಗೆ ಗೌರವದ ಮತ್ತು ಕೃತಜ್ಞತೆಯ ವಂದನೆಗಳು.

ಕಥಾನಾಯಕನ ನಾಡು–ಗ್ರಂಥಕಾರನ ನಾಡೂ ಹೌದು–ಧಾರವಾಡ ಜಿಲ್ಹೆಯ ಗಡಿನಾಡೆಂದು ಹೆಸರಾದ ಮಲೆನಾಡು ಬೆಳುವಲಗಳ ನಡುವಣ ನೆಲ-ಹಾನಗಲ್ಲಿನ ಎಡಬಲದ ಕೆಲ. ಬನವಾಸಿಯ ದೇಶ ಈ ಪ್ರದೇಶದ ಪಶ್ಚಿಮಕ್ಕಿದೆ. ಪೂರ್ವದಲ್ಲಿ ಜೋಳ ಬೆಳೆಯುವ ಎರೆಹೊಲಗಳನ್ನು ನೋಡಬಹುದು. ಕಾವ್ಯದಲ್ಲಿ ಕಾಣುವ ಹೊಸಹಳ್ಳಿ–ನಲುವಳ್ಳಿ ಮುಂತಾದ ಊರುಗಳು ಹಾಗು ಉಳಿದ ಸ್ಥಳೀಯ ನಿರ್ದೇಶಗಳು ಕಂಡುಂಡ ಕೆಲ ಸ್ಥಳಗಳಿಂದ ಸ್ಫೂರ್ತಿಪಡೆದ ಕಲ್ಪನಾ ಪ್ರಪಂಚದಲ್ಲಿ ದೊರೆಯುತ್ತವೆಯೆ ಹೊರತು ವಾಸ್ತವದಲ್ಲಲ್ಲ. ಭಾಷೆ ಕೂಡ ಇದೇ ನಾಡಿನ ದೇಶಿ ನುಡಿ, ಅದಕ್ಕೆ ಗ್ರಾಂಥಿಕದ ಒಪ್ಪ ಹಾಕಿ ಬಳಸಲಾಗಿದೆ. ಕಾವ್ಯದಲ್ಲಿ ಬರುವ ಕಡಲ ಸೀಮೆಯ ಯಾತ್ರೆ, ರಥೋತ್ಸವ, ಕುಣಿತ, ಯಕ್ಷಗಾನ ನಾಟಕ ಹಾಗು ಹೊಲಗೆಲಸದ ಇತರ ಅಂಶಗಳು ಇತ್ಯಾದಿಗಳು ಸ್ವವೇದ್ಯವಾದವುಗಳು. ಶುಕ್ಲಪಕ್ಷದಲ್ಲಿ ಋತು ಸಂಚಾರವನ್ನು ನಡಸುವಾಗ ನಮ್ಮಲ್ಲಿಯ ಹಬ್ಬಗಳು ಹೇಗೆ ನಿಸರ್ಗ ಮತ್ತು ಜೀವನದ ಸಂಬಂಧಿಗಳಾಗಿ ಬಂದಿವೆಯೆಂಬುದನ್ನು ಸೂತ್ರರೂಪದಲ್ಲಿ ತೋರುವ ಯತ್ನ ಮಾಡಿದೆ. ಬಳಸಿದ ಛಂದಸ್ಸು ವಿವಿಧ ರಸಪೋಷಕವಾಗುವ, ಬಹುಮಟ್ಟಿಗೆ ನೀಳ್ಗವನಗಳಲ್ಲಿ ಪ್ರಚಲಿತವಿರುವ ' ಲಲಿತವೃತ್ತ '; ಹಾಡಲು ಅನುಕೂಲವೆನಿಸುವಂಥದು.

ಎಷ್ಟೇ ಎಚ್ಚರ ವಹಿಸಿದರೂ ನನ್ನೀಕೃತಿಯಲ್ಲಿ ಹಲವಾರು ದೋಷಗಳು ಸ್ವಾಭಾವಿಕವಾಗಿಯೆ ಉಳಿದಿವೆ–ಉಳಿದಿರಬಹುದು ಎಂಬುದರ ಅರಿವಿದೆ ನನಗೆ. ಸಹೃದಯರು ಈ ದೋಷಗಳನ್ನು ತಿದ್ದಿ ಹೇಳಿ, ರಸವಿಭಾಗವನ್ನು ಆಸ್ವಾದಿಸುವರೆಂಬ ನಂಬಿಗೆಯಿದೆ. ಕಥಾನಾಯಕ ಚೆನ್ನನೇ ಹೇಳುವಂತೆ " ಕಥೆಯ ಕಾಳ್‌ಪುಡಿಯನ್ನು ಜರಡಿಗೆಯೊಳೊಂದಿಷ್ಟು ಸೂಸುತ್ತೇನೆ. ' ಉರುಟು ಸಿಪ್ಪೆ ನನಗಿರಲಿ, ಸಜ್ಜಕವು ನಿಮಗಿರಲಿ' ಎಂದಷ್ಟು ಅರಿಕೆ ಮಾಡಿಕೊಂಡು ಈ ಕಾವ್ಯವನ್ನು ಜನತಾಜನಾರ್ದನನ ಪದತಲದಲ್ಲಿ ಅರ್ಪಿಸುತ್ತೇನೆ. ಸೇವೆಯ ಸ್ವೀಕಾರವಾಗುವುದಷ್ಟೆ ?

ಧಾರವಾಡ
೨೪—೫—೧೯೫೩

**ಚಿದಂಬರ ದೀಕ್ಷಿತ**

# ಸೆರೆಯಾಳು

## ಶುಕ್ಲಪಕ್ಷ

ಬನದ ಹುಣ್ಣಿವೆಯಿರುಳ್ ಬನವಾಸಿ ಬನದೊಳಗೆ
ಮಲ್ಲಿಗೆಯೆ ಸೊನೆಯಾಗಿ ಸುರಿಯುತಿಹುದು.
ಅಮೃತಗಂಗೆಯೆ ಇಳಿದು ಹೊಳೆ ಹಳ್ಳ ತೊರೆಯಾಗಿ
ಅನುರಾಗ–ರಸವೊಂದು ನೊರೆಯುತಿಹುದು.

ಅಲ್ಲಿ ಮಾಮರಗಳಲಿ ಹಣ್ಣಳಿದ ಎಲೆಗಳಲಿ
ಹೊನ್ನೆ ಹುಡಿಹುಡಿಯಾಗಿ ಉದುರಬಹುದು.
ಊರು ಕೇರಿಯ ನಲ್ಲನಲ್ಲೆಯರು ಐತಂದು
ಎದೆಯ ತಳಿಗೆಯನಲ್ಲಿ ತೆರೆಯಬಹುದು.

ಅರೆಯ ಎಚ್ಚರದೊಳಗೆ ಗೂಡಿನಲಿ ಗುಟುಕೆನುತೆ
ಪ್ರಣಯ ಗೀತವ ಹಕ್ಕಿ ಹಾಡಬಹವು.
ಅರೆ ಮರುಳು ಈ ಲೋಕ! ಪ್ರಣವ ನಾದವೆ ಮೂಕ!
ಎನೆ ವಿಲಾಸದ ವೀಣೆ ತೀಡುತಿಹವು.

ಆ ತಾಳ ಲಯದೊಳಗು ಸೊಬಗೆ ನಲ್–ತಳಿರಾಗಿ
ಆಗಸದಿ ಹೆಣೆಯುತಿರೆ ತೋರಣವನು,
ನಂದನಕೆ ಮಿಗಿಲಾಗಿ ಈ ನೆಲವೆ ದಿಗಿಲಹುದು!
ಕಳೆಯುವುದು ಇಲ್ಲಿ ಮನಭಾರಣೆಯನು.

ಎನಿತು ಬಂಧುರತರವು ಇದು ಬಾಳ ಹಂದರವು!
ಇಂತೆಂದು ನುಡಿಯುವೆವು ಈ ಕೆಲದಲಿ.
ಬೇರೊಂದು ಬಗೆಯಾಳ ಮನದೆದುರು ನಿಲ್ಲ ಬರೆ
ಮರುಚಣಕೆ ತೆರಳುವೆವು ಅದರಡಿಯಲಿ.

ಇಳೆಬಾಳಿನೊಗಟೆಯಿದು, ನೇಸರನು ಸುತ್ತುತಿರೆ
ಆರೆತಿರೆಯು ಬೆಳಕಿನಲಿ ಮಿರುಗಬಹುದು.
ಉಳಿದರ್ಧ ನೆಲ ಬದುಕು ಇರುಳ ತಿರುಗಣೆಗಿಳಿದು
ಶೇಂಕಾಡಿ ಕಾಳದಲೆ ಕೊರಗಬಹುದು.

ಅಹಹ! ನೋಡದೊ ಅಣ್ಣಾ, ಜಗದ ಮೋಡಿಯ ಬೆಡಗು!
ಇಲ್ಲಿ ತಿಂಗಳ ಬೆಳಕಿನಾಲಿಮನೆಯು.
ಅದೊ ದೂರ ದುರ್ಗದಲಿ ಕೋಟಿ ಕಾವಲದೊಳಗೆ
ಕಾವಳವು ದಾಳಿಟ್ಟ ಕಲ್ಲುಮನೆಯು.

ಇಲ್ಲಿ ಪ್ರೀತಿಯ ಗೀತ ಅಲ್ಲಿ ಜೀವನ ದ್ಯೂತ
ಅದಟುಹರೆ ಮೊಳಗಿಸಿದೆ—ಗಂಡು ದನಿಯು!
ದನಿಯ ದಾರಿಯ ಹಿಡಿದು ಪಯಣಿಸಲು ಅದರೆಡೆಗೆ
ದೊರಕುವುದು ನಮಗಲ್ಲಿ ವೀರಗಣಿಯು!

ಕೊತ್ತಲದ ಬಾಗಿಲಿನ ಕೋಡುಗಲ್ಲಿನ ಕೊನೆಗೆ
ಜೋಲಾಡುತಿಹುದೊಂದು ಸಾರುಹಲಗೆ.
ನ್ಯಾಯ ನಾಯಕರಾರೊ ಮುದ್ರೆಯೊತ್ತಿಹರದಕೆ :
" ಧರ್ಮಶಾಸನ ಸ್ಥಾನ "—ಬರೆಹ ಕೆಳಗೆ.

ತಪ್ಪು ಒಪ್ಪಿತಗಳನು ಕಾಣೆಗೋಲಲಿ ತೂಗಿ
ದ್ರೋಹಿಗಳ ಎಳತಂದು ಇಲ್ಲಿ ನೂಗಿ,
ಪಾಪ ಶಾಪವನೆಲ್ಲ ಶುದ್ಧಿಕಲಿಸಲಿಕೆಂದು
ಅಗ್ನಿ ಸಂಸ್ಕಾರವಿದೆ—ಎಂಬುದಾಗಿ,

ಘೋಷಿಸಿದೆ ಹೊರವೋಲೆ; ಒಳಗೆ ಯಾವುದೊ ಲೀಲೆ;
ಗೋಡೆಯೊಡೆಯಲು ಬಹುದೆ ಮುಂದೆ ಸಾಗಿ ?
ನಿಲ್ಲು ನಿಲ್ಲೆಲೆ ಜಾಣ; ಇತ್ತ ಸುಳಿವುದು ಇದೆಕೊ
ಕಾವಿನಲಿ ಕಾಯಿದನಿ ಹಣ್ಣು ಆಗಿ.

ಇದು ಒಂದು ಬೆಂದೆದೆಯ ನೋವಿನೊರತೆಯು ಕಡೆಯೆ
ರಸವಟ್ಟ ಜೀವನದ ಬೆಣ್ಣೆಯನ್ನು.
ಸವಿ ಕಹಿಯ ಸಾಂಗತ್ಯ ಸರಸದಲಿ ಸೆಲೆಯೊಡೆದು
ಝುರಿಯಾಗಿ ಹರಿಯುತಿದೆ ಒರೆಯೆ ಹೊನ್ನು.

ಇದಕೆ ಪೋಷಕ ಮೇಳವೆನ್ನುವೊಲು ಕದಕಾವ
ರಾಜಪುರುಷರ ಗೊರಕೆ ಗರಿಗೆದರಿದೆ.
ಸರಿ ಇರುಳ ಹೊಲಬರಿದು ಕಣ್ಣುಕಪ್ಪಡೆ ಕೂಟ
ಪಂಚಸ್ವರಗಳ ಹೊರತು ಬರಿ ಒದರಿದೆ.

* * *

“ ಬನ್ನಿರಿದೊ ಗೆಳೆಯರಿರ ಸೆರೆಮನೆಯ ಸೋದರಿರ
ಬನ್ನದಲಿ ಧೃತಿಯಿತ್ತ ಬಂಧುಗಳಿರ,
ಹಗಲಗನಸನದೇಸೊ ಕಟ್ಟಿ ಕುಣಿದಾಡಿರುವ
ಒಂದೆ ಜೀವದ ಹಲವು ಅಂಗಗಳಿರ.

ಇಂದೆನ್ನ ಕೊನೆಯ ದಿನ, ನಾಳೆ ಮುಂದಣ ಪಯಣ:
ಎಳೆ ಬಾಳ ಆಖ್ಯಾನ ಕೇಳಬನ್ನಿ.
ನಿಮ್ಮ ಆಸರೆ ನೆಳಲೆ ಎನಗೊಂದು ಅಮರಸುಖ;
ಮತ್ತೊಮ್ಮೆ ಒಲವುಸೊದೆ ಹಣಿಸಲೆನ್ನಿ.

ಈ ಮುಗಿಲ ಉನ್ನತದಿ ಅಲ್ಲೊಂದು ನಾಡಿಹುದು;
ಅಲ್ಲಿ ಬೆಳಕೊಡೆದು ಅಣುಕಣಗಳಾಗಿ,
ಚಿಕ್ಕ ದೊಡ್ಡವರೇನು ? ಜಾಣ ಕೋಣರದೇನು ?—
ಬದುಕುವರು ಪುಂಜದೊಲು ಒಂದೆಯಾಗಿ.

ಮತಗಿತದ ಬಣಗು ನುಡಿ ಅವರ ಮನೆಯಂಗಳದ
ಹುಡಿಯೊಳಗೆ ಹೊರಳಾಡಿ ನರಳುತಿಹವು.
ದಾಸ್ಯ ಸಂಕೋಲೆಗಳೆ ಒಡೆದು ಸಿಡಿಮುದ್ದಾಗಿ
ಈ ಸೀಮೆ ಮಣ್ಣಿಗೆಯೆ ಮರಳುತಿಹವು.

ಆ ಊರ ಸೇರಲಿಹ ಪೌರುಷದ ಹಿರಿ ದಂಡು
ಗಂಡು ಬಾವುಟವೊಂದ ಏರಿಸಿಹುದು.
ಸಾವು, ಅದರಡಿಯಲ್ಲಿ ಅಟ್ಟಹಾಸದ ನೃತ್ಯ
ಭಂಗಿ ಭಣಿತದ ಕೂಡೆ ತೋರಿಸಿಹುದು.

ಇದರ ಬೆಡಗುಣ್ಣದೆಯೆ ಮುಂದೆ ಸುಸುಳುವ ಕಣ್ಣು
ಈ ನೆಲದ ಜನಕಿಲ್ಲ, ಬಲ್ಲೆ ನಾನು.
ಅಂತದರ ಸವಿಯುಣಲು ಅಂಜುವವ ಹೆಂಬೇಡಿ
ಎಂಬರಿವೆ ಎನಗಿದ್ದ ಹಾಲು ಜೇನು !

‘ ಇದ್ದು ಅಳುವುದಕಿಂತ ಸತ್ತು ಸ್ವರ್ಗವ ಸೇರು ’
ಎಂಬೊಂದು ಧೀರ ಹರೆ ಮೊಳಗುತಿಹುದು.
‘ ತಾಯ್ನಾಡ ಬಿಡುಗಡೆಗೆ ಮೈಯ್ಯ ಹುಡಿ ಮಾಡಿದವ ’
ಎಂಬ ಮನ್ನಣೆಯಲ್ಲಿ ತೊಳಗಬಹುದು.

ನಾನೇಸೊ ಬಂಟಬಲ ಚರಿತೆಗಳ ಕೇಳಿಹೆನು:
ಅಭಿಮನ್ಯುವೆಂಬೋರ್ವ ವೀರಗುವರ
ಚಕ್ರವ್ಯೂಹವ ತೊಡೆಯೆ ಗಂಡುಗಾಸೆಯ ಕಟ್ಟಿ
ಹೋರಿದನು ದಾರುಣದಿ ದೊಡ್ಡಬವರ.

ಸೋಲು ಗೆಲುವುಗಳೇನು ಕೈದುವಿನ ಕೈಯಾಳಿ ?
ನಮ್ಮೆದುರು ಗುರಿಯೊಂದೆ ಬಹಳ ಮುಖ್ಯ.
ಆಳವಹ ಕಡಲೊಳಗೆ ಮುಳುಮುಳುಗಿ ಏಳುತಿರೆ
ನಡವಳಿಕೆ ದೋಣಿಯೊಲು ತಹುದು ಸಖ್ಯ.

ಮೋಸ ರೋಷದ ಅಲಗು ಮುಸುಕಿನಲಿ ಬೆನ್ನಿರಿದು
ಕೊನೆಗೆ ವೀರನ ಶಿರವು ಕಳಚಲೊಡನೆ
ದೇವಲೋಕದಲಿಂದ ಪುಷ್ಪವೃಷ್ಟಿಯೆ ಸಂದು
ಗಣಿಕೆಯರು ಎತ್ತಿದರು ಮಂಗಳವನೆ.

ಎನ್ನ ಕಿರಿ ಬದುಕಿನಲಿ ಬರಿಯೆ ರಣಕಿಡಿಯಾಗಿ
ಯಾಗಶಾಲೆಯ ಹೊಗೆಯು ಧೂಳುದುಂಬಿ
ಕಣ್ಗೆ ಕತ್ತಲೆಯಹುದು; ಆದರೇನದು ಮತ್ತೆ
ಕುರುಡೆ ದಯದೋರಿಹುದು—ಏನದೆಂಬಿ !

ನಾ ಬಲ್ಲೆ ಎನ್ನ ಬಲ. ಇವು ಬಯಲ ನುಡಿ ಬಳ್ಕೆ.
ಆ ಮಹಿಮರಡಿಹುಡಿಯೆ ಎನಗೆ ಸಾಕು.
ಸಿಮ್ಮ ಕಳವಳ ಕಂಡು ಸಂತವಿಸೆ ಮನದಂದು
ಆಡಿದೆನು ಹೊರಮಾತ ಏನೊ ನಾಲ್ಕು.

ಮುಸಿಯದಿರಿ ನನ್ನಿಯರ, ಕತೆಯ ಕಾಳ್-ಪುಡಿಯನ್ನೆ
ಜರಡಿಗೆಯೊಳೊಂದಿಷ್ಟು ಸೂಸುತಿಹೆನು.
ಉರುಟು ಸಿಪ್ಪೆಯು ನನಗೆ, ಸಜ್ಜಕವು ನಿಮ್ಮದಿಪೆ.
ಹಿಡಿಯಿರಿಂದೊ ಹೃದಯದಾ ಒಪ್ಪಿತವನು.

ನಲುವಳ್ಳಿ ಪಡುವಲಕೆ ಹೊಸ ಹಳ್ಳಿ ಹರಹಿಹುದು.
ನಲವ, ತೋಟದ ಬಳ್ಳಿ ಬೆಳೆಯಬಹುದು.
ಕೆಮ್ಮಣ್ಣ ನೆಲದೊಳಗೆ ಹಸಿರೆ ಹಸಿರಾಡುವುದು—
ನಮ್ಮೂರ ತಾಯಿಯರ ಕಳೆಯೆ ಅಹುದು.

ಗಡಿಕಲ್ಲ ತೆಂಕಣಕೆ ತೆಳುವಾಗಿ ತೀವುತಿದೆ,
ಆದು ಶಿವನ ಗುಡಿಯೆದುರ ತೀರ್ಥಹಳ್ಳ.
ಗೌರೀಶ ಜಡೆಯಿಂದ ಗಂಗೆಯನೆ ಇಳುಹಿದನೊ,
ದೇಸಿಗರ ಮೈಧಮನಿ ತುಂಬೆ ಕೊಳ್ಳ.

ಓರಿಗೆಯ ಹಲಕೆಲರು ಕಪ್ಪು ಕುರುಡಾಟದಲಿ
ಪಂಡೆಯೊತ್ತಿನ ಮೊಟ್ಟೆ ದಿಬ್ಬಕೆದ್ದು
‘ ಒಂದು ಎರಡೂ ಮೂರು ’ ಎಂದು ಒಮ್ಮೆಲೆ ಎಣಿಸಿ
ಸೆಳವಿನಲಿ ಧುಮುಕಲದು ಏನು ಸದ್ದು !

ಉಲ್ಕೆ-ಗಿಲ್ಕೆಗಳೆನಿತೊ ಗುಂಡುಗಲ್ಲುಗಳಾಗಿ
ಹೊಳೆಹೊಳೆದು ನೀಲವಹ ಬಾನಿನಿಂದ
ಮಾಲೆ-ಗೋಲೆಗಳಾಗಿ ಭೂಮಿಗಿಳಿಯುವ ಪರಿಯು;
ಕಂಡುಂಡ ಕಣ್ಣಿಗೋ ದಿಗಿಲ ಬಂಧ !

‘ ಒಳ್ಳಿತೊಳ್ಳಿತು ಚೆನ್ನ, ಮುಳುಗೆ ಇರು ನುಡಿವನ್ನ:
ಇನ್ನೂರು ಅಂಕೆಗಳ ಎಣಿಸುತಿಹೆನು.
ನೀನುಸಿರ ಬಿಗಿ ಹಿಡಿದ ಬಲದ ಬೆಲೆ ಅಳತೆಯನು
ಈಜು ಸೆಣಸಿನಲಿಂದು ಗಣಿಸುತಿಹೆನು. ’

ಅಂತೊಂದು ಮೇಲುದನಿ ಬೆನ್ಗೆ ಭಪ್ಪರೆ ಎಂದು
ಹುಮ್ಮಸದ ಸವಿಯನ್ನು ಹಣಿಸುತಿತ್ತು.
‘ ಜಯ ಹನುಮ ಬಲಭೀಮ ’ ಎಂದು ಉಗ್ಗಡಿಸುತ್ತ
ಗರಡಿಮನೆಯೊಳ ಗದೆಯು ಕಿನಿಸುತಿತ್ತು.

ದೇಗುಲದ ಬಲಗಡೆಯ ಕಾಲ ಹಾದಿಯ ಹಿಡಿದು
ಮುಂದೆ ದಯಮಾಡಿಸಲು ಮುಳ್ಳಬೇಲಿ
ಮನೆಯ ಕಾವುದಕೆಂದು ಕೋಟೆ ಕಟ್ಟಿಹುದಲ್ಲಿ,
ಬದಿಯಲೇ ನಿಂತಿರಲು ಹಾದಿ ಸೀಳಿ.

ಅದೆ ಸೀಳ ಮಗ್ಗಲಿಗೆ ಹಾಳೆ ಹೊಲವೊಂದಿಹುದು:
ಉತ್ತಿ ಹೊನ್ನನೆ ಬಿತ್ತಿ ಬೆಳೆಯಬಹುದು.
ಮಾವು ಬೇವುಗಳೆರಡು ಜಯವಿಜಯರಂತಲ್ಲಿ
ನಿಂದಿರಲು ದಣಿವಳಿಸಿ ತಣಿಯಬಹುದು.

ಹುಣಿಸೆ ಮರವದು ಹೂತು ಚಿಗಿತು ನಕ್ಕಾಗೊಮ್ಮೆ
ಹೂವೆ ಅಂಗಣಕೆಲ್ಲ ಥಳಿರ ಸುರಿದು,
ಕರಿಯ ಕಂಬಳಿ ಮೇಲೆ ಬಿಳಿಯ ವಲ್ಲಿಯ ಹೊಚ್ಚು,
ರಂಗವಲ್ಲಿಯ ಚಿತ್ರ ನೆನಕೆ ತಹುದು.

ಅದರ ಹಸೆ ಸಿಂಗರದಿ ನೆಳಲಿನಾ ಹಂದರದಿ
ದಿನಕೇಳು ಕಲ್ಯಾಣ ಕಟ್ಟಿದುಂಟು.
ನಾ ಚಿನ್ನ ನೆರೆಮನೆಯ ಸೀಲೆ ಹೂವಿನ ಹುಡಗಿ
ತಂಗಿ ಲಲಿತೆಯ ಬಳಗ ಆಡಿದುಂಟು.

ಉದುರುದುರಿ ಬಿದ್ದಿರಲು ಬೀತ ಬೀಜಗಳೆನಿತೊ
ನನ್ನ ಅಂಗಡಿಯೊಳಗೆ ತುಂಬ ಮಾಲು.
ಕಲ್ಲು ಗೊರಪೆಗಳೆಮಗೆ ಚಿನ್ನ ನಾಣ್ಯಕು ಮಿಗಿಲು:
ತಂಗಿ ಅವುಗಳನಾಯ್ದು ತುಂಬುತಿಹಳು.

ಆಟಕೂಟದ ಮಾಟ, ತೋಟದೂಟದ ಬೇಟ,
ನಡುವೆ ನಾಟಕ ರಾಜ ರಾಣಿಯಾಗಿ
ನಡೆದಿರಲು ಕೋಲ್-ಕುಣಿತ ಬಹುದು ಮಧ್ಯಕೆ ಘಾತ
‘ ಪಾಲ ಫೂ ಫೂ ’ ಎಂದು ಮೋತ ಗುಡುಗಿ.

ಎರಗುವವು ಬರಸಿಡಿಲು; ಮೋರೆ ಉರಿಮುರಿದಾಡೆ
ಕಣ್ಣುಗಳು ಜಡಿಮಳೆಯ ಸುರಿಸುತಿರಲು
ತಾಯಿ ಶ್ಯಾಮಲದೇವಿ ದುಡುಕಿ ವೈವಡಹುತ್ತೆ
ತನ್ನ ತೋಳ್ಬಡಿಯೊಳಗೆ ನಿದ್ದೆ ತಹಳು.

ತಾಯಿ ಕರುಳಿನ ಹೆಣ್ಣು ದೇವನಾಣತಿ ಪಡೆದ
ಅಮರ ಆಶೀರ್ವಾದವೆನ್ನಬಹುದೆ ?
ಹಾಲ್ಗರೆವ ಹಸು ತನ್ನ ಮೊಲೆ ರಕ್ತ ಹೀರಿವರು,
‘ ಬಸಿರ ಕರುಗಳೆ ! ’ ಎಂದು ಮರುಕವಿರದೆ ?

ಹಸಿದ ಹೊಟ್ಟೆಯ ಅವ್ವ ತನಗುಳಿದ ತುತ್ತಿನಲಿ
ತುಸುತುಸುವೆ ಕರೆದವರ ಕೈಯೊಳಿರಿಸಿ
‘ ಕಂದಗಳಿರಾ ಇದುವು ನಿಮ್ಮ ನಿಮ್ಮಯ ಪಾಲು ’
ಎಂದೆನುತೆ ಏಳುವಳು ಊಟ ಮುಗಿಸಿ.

ವಾತ್ಸಲ್ಯವೆಂಬೊಂದು ಭಾವ ನಂದಾದೀಪ
ತಾಯ ಎದೆಗುಡಿಯಲ್ಲಿ ಬೆಳಗುತಿಹುದು.
ನೋವು–ಕಾವಿನ ಜೀವ ರಸ ಸರಸ ತೊರೆಯಾಗಿ
ಎಣ್ಣೆಯೊಲು ಕುಡಿಮಿಂಚ ಪೊರೆಯುತಿಹುದು.

ಹತ್ತು ಸಾವಿರ ಹಣತೆ ಕುಡಿಮಿಂಚ ಕುಡಿಕುಡಿದು
ಹೊತ್ತಿಸುತೆ ಹೊಸಬಾಳ ದೀವಿಗೆಯನು
ಜೀವನದ ತುಂಬೆಲ್ಲ ದಿವ್ಯಜ್ಯೋತಿಯ ಚಿಮ್ಮೆ,
ಉದಿತ ರವಿ ಹರಹುವನು ತಿಳಿ ಅರಿವನು.

ಇಂತರಿವು ಇರವಿನಲಿ ಇಳಿಇಳಿದು ಬಂದಾಗ
ನಾನೇಕೊ ದುಗುಡದಲಿ ಅಳಲುತಿಹೆನು.
ಡುಗುಡದಾ ಧಗೆಯೊಳಗೆ ಹವನ ನಾನಾದಾಗ
ಒಳಗೆ ಒಳಗೆಯೆ ಬೆಂದು ಬಳಲುತಿಹೆನು.

* * *

ನಮ್ಮೂರ ವೆಂಕಟನ ರಥದ ಹಬ್ಬದ ಸೊಗಸ
ನಿಮ್ಮೆದುರು ಹೇಳದಿರೆ ಬಹಳ ತಪ್ಪು.
ಭಾರತದ ಹುಣ್ಣಿವೆಯ ಬೆಳಗಿನರುಣೋದಯಕೆ
ಸೂರ್ಯದೇವರ ಸಿಬ್ಬಣಕ್ಕೆ ಒಪ್ಪು!

ಮೂಡಲದ ಸತಿ ಕೆನ್ನೆ ಕೆಂಪು ನೀರ್ ಬುರುಗಿನೊಲು
ಕಾರಂಜಿ ಕಡೆವಡೆದು ಹೊಮ್ಮುತಿರಲು,
ಆ ರಸವೆ ಘನವಾಗಿ ಮತ್ತೆ ಪುಡಿಪುಡಿಯಾಗಿ
ಇಲ್ಲಿ ಸುರಿಯುತಲಿತ್ತು ಕುಂಕುಮದೊಲು.

ಡೊಳ್ಳು ಮದ್ದಳೆ ಮೊಳಗು ಗಗನಕ್ಕೆ ದಾಳಿಡಲು
ಅಲ್ಲಿ ಜನಗಳ ಗೋಳ ಮರುದನಿಯೊಲು,
ಪ್ರತಿ ರವವು ನೆಲ ಬಾನ ನಡುವಿನವಕಾಶದಲಿ
ಚದುರಿ ಪಸರಿಸುತಿತ್ತು ತೆರೆತೆರೆಯೊಲು.

ಓಲಗದ ಓಬಯ್ಯ ಬಾಜಿಸಿದ ಸೋನಾಯ
ಸಾವೇರಿ ಸಂಗೀತ ಏರಿ ಸಾಗೆ,
ಗೋವಳರ ಗಗ್ಗಯ್ಯ ನುಡಿಯಿಸಿದ ಬಿದಿರ್ಗೊಳಲ
ಇಂಚರವು ಅಡಗುವುದು ಮೋಡದೊಳಗೆ.

ಅವರ ಸೆಣಸಿನ ವಾದ್ಯ ಮಧ್ಯಪದ್ಯವ ಬಿಟ್ಟು
ಎದ್ದೆದ್ದು ಹಾಕುತಿರೆ ಕಾಲಗೆಜ್ಜೆ,
ಥಕ್ಕ ಥಕ ಥೈಯೆಂದು ಪರಿಸೆಯದು ಸೈಯೆಂದು
ಮುಂದುವರೆಯುತಲಿಹುದು ಒಂದು ಹೆಜ್ಜೆ.

ಲಿಂಗದಳ್ಳಿಯ ಲಚುಮ ಲಾವಣಿಯ ' ಕದಿರಾಮ '
ಸಿಂಧೂರ ಲಕ್ಷ್ಮಣನ ಗಂಡುಗತೆಯ
ಬಿತ್ತರಿಸೆ, ಅವರ ಬಗೆ ಗೋಕಾಕ ದಬದಬೆಯ
ಕೆಚ್ಚು ಎದೆಗಡೆವಂತೆ—ಅಂಥ ಪ್ರಳಯ !

ಭಾಪು ಭಾಪುರೆ ಎಂದು ತೋಪು ನೆರೆ ಬೆಟ್ಟಗಳು
ತಾಕಲಾಡಿದುವೇನೊ ಹಗೆಯ ಮಸೆದು
ಎನ್ನುವೊಲು ಗುಡುಗು ದನಿ ಗಡಗಡನೆ ನಡೆದಿತ್ತು,
ಧೀಂಕಿಡುವ ತುಂಗೆಯೊಲು ಗುಡ್ಡವೊಡೆದು !

ರಥದ ಬೀದಿಯ ಗೂಡ ಹತ್ತಾರು ಎಡೆಗಳಲಿ
ಮಾಂದಳಿರ ತೋರಣವು ಉಯ್ಯಲೆಯೊಲು,
ತಳಿರು ಜೋವಲಿಯೊಳಗೆ ಬಳ್ಳಿವಳ್ಳಿಯ ಮಾಡ
ಹೂಗೊಂಚಲಿನ ಗೊಂಡೆ ತೂಗುತಿರಲು,

ಧ್ರುವನ ಸುತ್ತುತಲಿರುವ ಸಪ್ತಋಷಿಗಳ ಭಂಗಿ
ಇಲ್ಲಿಯೇ ಇಳಿದಂತೆ ಕಾಣುತಿಹುದು.
ಮಂದಾರ ಮದರಂಗಿ ಸೇವಂತಿ ದಾಸಾಳ
ಕಟ್ಟಿಹವು ಇಂದ್ರಧನು ಎನ್ನಬಹುದು.

ಹುಡಿಯೆದ್ದ ನೆಲ ಕೂಡ ಥಳಿರು ಸಾರಣೆಯಿಂದ
ತಿಳಿ ನೀಲ ಅಮೃತಶಿಲೆಯಾಗಿರುವೊಲೆ
ಎಳೆವಿಸಿಲು ಮೈತೀಡಿ ಅಲ್ಲಿ ತುಸ ಹೊರಳಾಡಿ
ಮಗುವಿನೊಲು ಆಡುತಿರೆ ಮನಸು ಮರುಳೆ !

ಎರಡೆರಡು ನಿಮಿಷಕ್ಕೆ ನಿಬ್ಬಣದ ನಿಲುಭಂಗಿ
ನೆರವು ಹೊಂದುತಲಿರಲು ಎಡೆಗೆ ಎಡೆಗೆ,
'ಜಯಜಯತು ಗೋವಿಂದ' ಎಂಬ ಒಕ್ಕೊರಲೊಂದು
ಬಲಗೂಡಿ ತಲುಪಿಸದು ತೀರ ಗಡಿಗೆ.

ಊದುಬತ್ತಿಯ ಹೊಗರು; ಕರ್ಪೂರದಾರುತಿಯು;
ಕಮ್ಮಲರಿನೋಕುಳಿಯು ಜೀಕಳಿಸಿದೆ.
ಮೈಗೆ ಮೈಯೇ ತೂಗಿ ರೋಮರಸದಲಿ ಅದ್ದಿ
ಸೆಕೆಯಾರೆ ಹೊರಗಾಳಿಗಾಕಳಿಸಿದೆ.

ದೇವಕನ್ನೆಯ ಚವರಿ ಚಂದನದ ಜಲ ಸವರಿ
ಸವಿಯೆಲರ ಸುಳಿಸುತಿರೆ ಇದೆ ಸಮಯಕೆ
ಅರ್ಚಕರ ಹರಿದೆದೆಯು ಅದರ ಸೊಂಕಿಗೆ ತೊಡಕಿ
ಕುಲುಕುಲನೆ ಉಳುಕುವುದು ತಾನೆ ಕೆಳಕೆ !

ಇತ್ತ ಇಂದ್ರನ ಹೆಣ್ಣು ರಂಭೆ ಊರ್ವಸಿ ಎನ್ನು
ಸುರಲೋಕದಿಂದಿಲ್ಲಿ ಇಳಿಗಿಳಿದೊಲು,
ದೇಸಾಯ ದೊರೆಸಾನಿ ಊರುಕೇರಿಯ ರಾಣಿ
ಮನಸಿಜನ ಕರವಾಣಿ ಸಂಧಿಸುವಳು.

ನವಿಲೂರ ಪೇರಲವು ನಾಚೀತು ಅವಳೆದುರು.
ಅಂತಿರುವ ಮೈಬಣ್ಣ ಹೊತ್ತ ಚೆಲುವು.
ಹಣ್ಣಾದ ಹವಳಸೊನೆ ತುಟಿಗೆ ತುಂತುರಿಸಿರಲು
ಕಣ್ಣಿನಭ್ರುಕದೊಳಗೆ ತುಂಬಿದೊಲವು.

ಕೊರಲು ತುಸ ಗೊರವಂಕ; ಇಂಬುಗಾಣದು ಬಿಂಕ:
ಬಳುಕು ಮೈ ಪುಳಕಕ್ಕೆ ಬಣ್ಣವೇಕೆ ?
ಜೀವಿ ಜೀವಿಗು ಇದ್ದ ಪ್ರಣಯ ದಾವಾನಲಕೆ
ಇಲ್ಲಿ ಕಿಡಿಕೊಡಬಹಳು ಬೆಡಗಿನಾಕೆ.

ಗೊಲ್ಲ ಕೃಷ್ಣನ ಲೋಲೆ ತನ್ನ ನರ್ತನ ಸಾಲೆ
ಗರುಡಗಂಬದ ಕಟ್ಟೆಗೇರಿಸಿರಲು,
ಇಕ್ಕೆಲದ ಒಕ್ಕಲರ ಹುಬ್ಬು ಕುತಕಕೆ ಕೊನರಿ
ದೃಷ್ಟಿಘನು ಬಿಗಿಯುವುದು ತೋರಣದೊಲು.

ಅವಳುಟ್ಟ ರೇಸಿಮೆಯ ಸೀರೆ ತುಮ್ಮ್ರಿನಕಟ್ಟಿ
ಕಲನೀರ ಕುಸುರಿಸಿದ ಚತುರ ಕಲೆಯು,
ಜರತಾರಿ ಜೇಡಗಳು ಜಾಡು ಮಾಡಿಡ ಪರಿಯು,
ನಡುವಿರುಳು ನಕ್ಷತ್ರ ನಿಂತ ನಿಲುವು !

ಬಂಡುಂಡ ತುಂಬಿಗಳು ಹುಟ್ಟಿಡಿದು ಜೋಲುವೊಲು
ಇಳಿಬಿದ್ದ ಕರಿ ಹೆಳಲು ಗಾಳಿಯಲ್ಲಿ
ಹೊಯ್ದಾಡೆ ಮುಂಗಾರ ಮಳೆಯು ಕಾಲಿಳಿದಂತೆ
ದೂರವಾವುದೊ ಬಯಲ ಠಾವಿನಲ್ಲಿ.

ಜಡೆಯುದ್ದ ಸಂಪಿಗೆಯು, ಕೇತಿಕೆಯು ಕಿವಿಯ ಬಳಿ,
ಜೈತಲೆಗೆ ಮುತ್ತಿಡಲು ಚೆಂಗುಲಾಬಿ.
ನಲಿವುಂಡ ನರುಗಂಪು ನವಿರೆ ನವಿರಾಗುವುದು
ಕಾಮಕಸ್ತೂರಿಯೊಳ ಗಂಧ ಮಾಗಿ.

ಕಣ್ಗೆ ಕಾಡಿಗೆ ಬಿಲ್ಲು; ಮೊಗ, ಪರಾಗವ ಎಲ್ಲು
ಕುಡಿದಿರಲು ಅನುರಾಗ ಕೇಳಬೇಕೆ?
ನೃತ್ಯ, ಭಸ್ಮಾಸುರನ ಸುಟ್ಟ ಮೋಹಿನಿ ಮಂತ್ರ !
ತಾಳ ಲಯ ರಸಭಾಗ ಹೇಳಲೇಕೆ?

ಉಟ್ಟ ಸೀರೆಯ ನೀರಿ ಸಡಲಿತಾ ಸರಭರಿಸೆ
ಟೊಂಕದೊಡ್ಡಾಣವದು ಛಲಿಛಲಿರೆನೆ
ಅಡಿಯ ಪೈಜಣ ಸದ್ದು ಗುರಿಕಾರರೆದೆ ಕದ್ದು
ಒಲವೆ ಗಳಕನೆ ಕಳಚಿ ಘಲಿಘಲಿರೆನೆ

'ಹಿಡಿ ಹಿಡಿಯೆ ವೀಳೆಯವ, ಹೀರಕದ ಈ ವರವ'
ಎಂದು ಒಡೆಯರು ತಮ್ಮ ಉಂಗುರವನೆ
ತೊಡಿಸುತಿರೆ ಹರಿಕಾರ ಕೈತಾಳೆ ಮೊಳಗುವವು,
ಅವಳ ಮೊಗ ನಸುಬಾಗಿ ನಾಚಿದಳೆನೆ !

*  *  *

ಕನಕಾಂಗಿ ಕಲ್ಯಾಣ ನಲುವಳ್ಳಿ ಅಭಿಮಾನ,
ಹೊಸಹಳ್ಳಿ ಹಿಮ್ಮೇಳ ಅದಕೆ ಪ್ರಾಣ.
ನಮ್ಮಯ್ಯ ಮಧುರಣ್ಣ ಗಜಮುಖನ ಸ್ತೋತ್ರವನೆ
ಎತ್ತುತಿರೆ ಕಳೆಯಹುದು ಯಕ್ಷಗಾನ.

ನೆರೆದ ಪ್ರೇಕ್ಷಕ ನೆರವಿ ನಿದ್ದೆಯನೆ ಅಪ್ಪಿದೊಲು
ಡೇಗುಲದ ಪೌಳಿಯದು ತಾಳೆ ಮೌನ
' ಹಲಲ ಹಲಲಾ ' ಎಂದು ಹೈಡಂಬ ತಾ ಬಂದು
ಗರ್ಜಿಸಲು ಉಡುಗುವುದು ಎದೆಯ ತ್ರಾಣ.

' ಆ ಕವಚ ಖಡ್ಗ ಧನು ಶರ ಕಿರೀಟಗಳನ್ನು
ತಾ ' ಎಂದು ಪಾರ್ಥಸುತ ಗುಡುಗುವಾಗೆ
ಆರ್ಪೊಗನ ಪೈಕಾವು ಅವನ ತಲುವಲಿ ತಂಗಿ
ಆಟ್ಟಲವೆ ಬೆದರುವುದು ಹುಲ್ಲೆ ಹಾಗೆ.

' ಕಣ್ಣ ಕಟ್ಟಿದ ಕಾಳ ಬೆಂಬಿಳಿದ ಬೇತಾಳ '
ತೊಲಗೆ ಹಲ ದಿಟ್ಟಗಳ ನೀವಳಿಸಲು
ಭಾಗವತ ಕೊರಲನ್ನು ಮಸೆದು ಹದನವ ಮಾಡಿ
ಆಲಾಪ ಹರಿಯಿಸುವ ತೆರೆತೆರೆಯೊಲು.

ಇತ್ತ ಹೆಂಗಳ ಕೂಟದಲ್ಲಿ ಕೊನರುವ ಕಥೆಯ
ಬಣ್ಣಿಸದೆ ಹೋಗಲಿಕೆ ಏನು ಬಂತು ?
ಅರ್ಧ ಎಚ್ಚರವಿದ್ದ ಕೂಸುಗಳ ಕಿರುಚಾಟ
ಗಂಟಲನೆ ಕೊರೆಯಲಿಕೆ ಸಂದ ಕಂತು !

ಬಾಯಿ ಬೀದಿಗೆ ಬಂದ ಬೊಂಬಾಯಿಯಾಗುವುದು;
ಹುಬ್ಬಳ್ಳಿ ಗಿರಣಿಯೇ ಗಿರಡಿಯಾಗೆ,
ಅಬ್ಬಬ್ಬ ! ಹುಬ್ಬುಗಳು ಸಿಡಿಸಿಡಿದು ಎದ್ದವೊಲು
ಕೊಬ್ಬುವುದು ಕಾಳಗವು—ರೀತಿ ಹಾಗೆ.

ಇಲ್ಲೊಂದು ಒಳಮಾತು, ಬಲಮೂಲೆಯಲ್ಲಿವೆಕೊ
ಗುಟ್ಟುಗಾಳಿಯ ಸುಳಿಯು ತಿರುಗುತಿಹುದು.
ಅಲ್ಲೆರಡು ಚೆಲುವೆಯರ ಕಣ್ನೋಟ ಸೇರಿನೊಲು
‘ ಅಭಿಮನ್ಯು ’ ವೇಷದೆಡೆ ಹರಿಯಬಹುದು.

ಅವ ಭರಮು; ಅವನ ಸತಿ ಇವರ ವೈಯಾರಕ್ಕೆ
ನೊಂದು ಅಯ್ಯೋ ಎಂದು ಮರುಗಬಹುದು.
ಮರುದಿನದಿ ನಲ್ಲನನು ಮರೆಯ ಸೆರೆಯೊಳಗಿರಿಸಿ
ಎದೆಯ ಕಸವಿಸಿ ಎದೆಗೆ ಒರೆಯಬಹುದು.

* * *

ಸಿಟ್ಟಾಗಬೇಡಿರಿಮೊ ಬೇಡುವೆನು ಅಣ್ಣದಿರ
ಎನ್ನ ಹೃದಯದ ಹರವು ಅರಿಯಿರೇನು ?
ಎಳೆಯ ದಿನಗಳ ಹಲವು ರಸ ನಿಮಿಷಗಳ ಹೊಳವು
ಮನದಿ ಮಸಳಲದೆಂದು ಉಸಿರುತಿಹೆನು.

ಮಧುರ ಹಾಡಿದ ನುಡಿಯು ಹಾಲುಬಳ್ಳಿಯ ಕುಡಿಯು
ಮಾಧವೀ ಲತೆಗಂಪು ಮಧುರ ಮುದವು.
ಹೊಸಹಳ್ಳಿ ಎಳೆ ಹರೆಯ ಹಿರಿಯ ಕೋಲಿನ ಕಳೆಯ
ನಡುಗಡಲ ಪಾತಳಿಯ ಸಮದ ಒದವು.

ಸುತ್ತ ಮನೆ ಹೆಂಗಸರು ಅವನಕ್ಕ ತಂಗಿಯರು,
ಮನ್ನಣೆಯ ಮಾತು ‘ ಮಧುರಯ್ಯನವರು ’.
ಚಿಕ್ಕ ಮಕ್ಕಳಿಗೋದು ಪಾಠ ಕಲಿಸುವ ಆರ್ಯ
ಹುಟ್ಟು ಹಸುಳೆಯ ಹಾಗೆ ಆಡಬಹರು.

‘ ಕಸ್ತೂರಿ ತುತ್ತೂರಿ ’ ರತ್ನನಾ ‘ ಕಡಲೆ ಪುರಿ ’
ಸಾಲೆ ಹುಡುಗರಿಗೆಲ್ಲ ಕವನ ಸುಗ್ಗಿ.
ಸುಳ್ಳು ಜೊಳ್ಳಿನ ಮಾತು ವಿಷವುಂಡ ಸಿಡಿಬೆಂಕಿ,
ಮಿಮುಗೆನ್ನೆ ಉರಿದಾವು ಗಲ್ಲ ಹಿಗ್ಗಿ.

ಇಂತಿರಲು ಅವನಿರವು ಆಲ ನೆಳಲಿನ ನೆರವು
ಬದುಕಿನಡಿತಡಿಯಲ್ಲಿ ತಣ್ಣೆಲವದು.
ನಡೆನುಡಿಯು ಬಲು ಚೆನ್ನು, ನೀತಿಯೇ ಹಿರಿಕಣ್ಣು,
ಮುಗಿಲ ಬೆಳ್ಳಿಯೆ ಬಾಳ ಗುರಿಯು ಆಹುದು.

‘ ಅಂತವಿಲ್ಲದ ಚಿಂತೆ ಒಗೆತನದಿ ಬರಿದ ’ಂತೆ.
‘ ಇದ್ದರಲಿ ಸೊಗಸುವುದೆ ನಿತ್ಯ ಜೀವ ’
‘ ತಾ ಸುರಿದ ಬೆವರ ಬೆಲೆ ಬಲು ಅಲ್ಪವೆನ್ನುವುದು
ದಡ್ಡನಾಡುವ ಹಾಡು—ದಿಟದ ಭಾವ. ’

‘ ನೋವ ಹೊನಲನು ತಡೆಯೆ ಏಸು ಮೆಟ್ಟಿನ ಒಡ್ಡು
ಏರೇರಿ ನಿಂತರೂ ಎಲ್ಲ ಬರಿದೆ;
ಬಿಸಿಲಗುದುರೆಯ ಬೆನ್ನ ಹಿಡಿವ ಸಾಹಸವದುವು;
ತೊರೆಯು ತಾ ಬಸಿಯುವುದು ಹೇಗು ಬಿಡದೆ. ’

‘ ಒಮ್ಮೊಮ್ಮೆ ಸಂಕಷ್ಟದಬುಧಿಯಾಳದ ಒಳಗೆ
ಅಣಿಮುತ್ತು ರತುನಗಳ ಬುದ್ಧಿ ಬೆಳಕು,
ಹಸರು ಹಳದಿಯೊ ಕೆಂಪು ಬೇರಾವ ಸುರಪೆಂಪು
ಬಾಳಮಣಿ ಮುಕುಟವದು—ಅಂಥ ಥಳಕು. ’

ಇವು ಅವನ ರಸವಾಣಿ ನೌಕೆಗಿಹ ಚುಕ್ಕಾಣಿ
ಹಾಯಿ ಹರಿದರು ದೋಣಿ ತೇಲಬಹುದು.
ರಸವಿರಸದೆರಕದಲಿ ಅಮರ ಜೀವನವರಳಿ
ಬಾಳ ಹಿತಮಿತವಾಗಿ ಆಳಬಹುದು.

ಅವನ ಅನುಭವ ಬೆಳಸ ಬಣವೆ ಸಹ್ಯಾದ್ರಿಯೊಲು
ಏರಿ ನಿಂದುದು ತಲುಪೆ ಗಗನ ಚುಕ್ಕಿ.
ಸುಡಿ ಸುಲಿದ ರಸಬಾಳೆ ಸರ್ವಜ್ಞನಮರ ದನಿ
ತಂತನನ ಸಂಗೀತ ರಾಗವುಕ್ಕಿ.

‘ ಹಲಗೆ ಬಳಪವ ಪಿಡಿಯದಗ್ಗಳಿಕೆ ’ ಗಮುಗಿನಾ
ನಾರಣಪ್ಪನ ಕಾವ್ಯ ಮನನವಾಗಿ,
ನಾಲಗೆಯ ಕೊನೆಯಲ್ಲಿ ಶಾರದೆಯ ಸೂದೆವಾಣೆ,
ನವ ಭಕ್ತಿರಸ ಹೊಮ್ಮಿ ಲಹರಿಯಾಗಿ,

ಪ್ರವಹಿಸುವ ಅವನ ಕತೆ ಹೊಸಹಳ್ಳಿ ಘನಚರಿತೆ,
ಮೂಡಲಗಸೆಗೆ ಬಂದ ದಿವ್ಯ ಭಾನು;
ಊರವರ ಎದೆಗುಡಿಯ ದೇವಸಾಕ್ಷಿಯ ಹಾಗೆ;
ಬೆಳಗುವುದು ಮನಹೊಕ್ಕ ಕುರುಡು ಕಾನು.

ಮಧುರನಾ ಸತ್ತಿಗೆಯ ಮುಗಿಲಿನಗಲದ ನೆರವ
ಕೊಡುವ ಕಿರುಗುಡಿಸಿಲಲಿ ಹಸುಳ ಹಸುಳೆ
ನನ್ನ ಲಲಿತೆಯ ಮೊದಲ ಬಾಳಗನಸುಗಳೆನಿತೊ
ಕೊನರಿ ನಿಲುವವು ಗಾಳಿ ಗೋಪುರದೊಲೆ.

ಅವ್ವ ನೆಲದೇವಿಯೊಲು ತೊಡೆಯ ಹಾಸಿಗೆ ಮಾಡೆ
ಅಲ್ಲಿ ಆಡುಂಬೊಲವ ಹೂಡುತಿಹೆವು.
ಅಯ್ಯ ಪ್ರೇಕ್ಷಕನಾಗೆ ಕಣ್ಣು ಮನ ಸಂತೈಸೆ
ಎರಳೆ ಮರಿಗಳ ಹಾಗೆ ಆಡುತಿಹೆವು.

ತಂದೆ ಸೆಳವಿನ ಹೊಳೆಯ ದಾಂಟಿಸುವ ಹರಿಗೋಲ
ಅಂಬಿಗನು; ಸಂಸ್ಕೃತಿಯೆ ಹುಟ್ಟುಗೋಲು.
ಅವಿವೇಕ ಮುಳ್ಳೊಂದು ನಡುವೆ ಎಟಕಲು ಸಾಕು
ಕಾಕ ಭೇಕಕೆ ಮನೆಯು ದೊಡ್ಡ ನೆರಳು!

ಇಂತವರ ಹರಕೆಯನು ಹೊತ್ತ ಹಾದಿಯ ಬುತ್ತಿ
ದೂರ ಪಯಣದ ನಡುವೆ ಅನ್ನವಹುದು.
ಅವನ ಕಡಲಿನ ಸೀಮೆಯಾತ್ರೆ ಸೊಬಗಿನ ಹಾಡು
ತಾಂಬೂಲ ಮೆಲ್ಪಂತೆ ಎನ್ನಬಹುದು.

ಭೂರಮೆಯ ಸೀರೆಗಿಹ ಸೆರಗಿನೊಲು ಹರವಿರುವ
ಕಡಲೆದೆಯು ತೆರೆವಡೆದು ಬೀಸುತಿರಲು,
ಮಂದೆಲರು ಸುಳಿಯಾಗಿ ವಿರಹಿಯೊಲು ತಪಿಸುತಿಹ
ನೊಂದಿರುವ ನೆಲದಾಕೆಗಾಸರೆಯೊಲು

ತಣಿವೀಯೆ ಬೆಳ್ನೊರೆಯು ಹಾಲು ಕೆನೆ ಬೆಣ್ಣೆಯೊಲು
ತುಟಿ ಮುದ್ದ ಸವಿಯಾಗಿ ತೇಲಿಬಹುದು.
ಇನಿಯನನು ಹೊರನೂಂಕಿ ಸೊಗಸಲಾರದ ಸತಿಯು
ಮರುಕಳಿಸೆ ಕಿಲ್ಬಿಷವೆ ಎನಿಸುತಿಹುದು.

ಆಷಾಢ ಬಂದಂತೆ ಕಡಲವ್ವ ಅಳುತಿಹಳು
ಮನೆಸೊಸೆಯ ಒಳನಾಡಿ ಮಾರ್ದನಿಯೊಲು.
ಶ್ರಾವಣದಿ ಸಿರಿ ಗೌರಿ ವರ ಮಹಾಲಕ್ಷ್ಮಿಯರು
ಕೃಪೆ ಮಾಡಬಹರೆಂದು ಸುಮ್ಮನಿಹಳು.

ನವರಾತ್ರಿ ಹಬ್ಬವದು ಎದ್ದೆದ್ದು ಕುಣಿಯುತಿರೆ
ದಿನಕೊಂದು ಪಕ್ವಾನ್ನ ಸವರಿಸುವಳು.
ಮಾರ್ಗದಲಿ ಊಟಕ್ಕೆ ತಾಟು ತಾಟನೆ ತುಂಬಿ
ಮಂಜ ಬುತ್ತಿಯ ಪತಿಗೆ ಕಳುಹುತಿಹಳು.

ಕನ್ನಡದ ಪಡುಗಡಲ ಸಂಜೆಯದ್ಭುತವನ್ನು
ಚಿತ್ರಿಸಲು ದೊರಕುವುದೆ ಬಣ್ಣ ಕುಂಚ ?
ನಲ್ಲನಗಲಿದನೆಂದು ಹಣೆಯ ಕುಂಕುಮ ಕದಡೆ
ರಾಗರತಿ ಸೌಭಾಗ್ಯ ಮುರಿದ ಮಂಚ.

ತಡಿಯ ಒಳನಾಡಿನಲಿ ಸೃಷ್ಟಿದೇವಿಯು ವಸ್ತ್ರ-
ಒಡವೆಗಳ ಪೆಟ್ಟಿಗೆಯ ಬೀಗವೊಡೆದು
ದಾರಿಯೊಳ ಮುಗುದೆಯರ ಮುಡಿಗೆ ಆಭರಣವೆನೆ
ತೊಡವಿನುಡುಗೊರೆ ಇತ್ತ ಪರಿಯೆ ಅಹುದು.

ಮೂಡಲದ ಬೆಟ್ಟಗಳು ಸೋಪಾನ ಕಟ್ಟಿರಲು
ಹುಚ್ಚು ಹಸಿರಿನ ಹೊಗರ ಸಾರಣೆಯಿದೆ.
ಮಲರುಟ್ಟ ಮುಂಜಾವ ಇನದೇವ ರಚಿಸಿರುವ
ಹೊನ್ನಬಳ್ಳಿಯ ಹೂವ ಕಾರಣೆಯಿದೆ.

ಭೂರತಿಯು ಬಾಂದೊರೆಯ ತೋಳನಪ್ಪಲು ಹೊರಟ
ಹಾತೊರೆವ ಹಬ್ಬುಗೆಯ ನಿಡುಕರಗಳು
ತೆಂಗು ಕಂಗುಗಳಾಗೆ, ಭಾವದುನ್ಮಾದದಲಿ
ಹಕ್ಕಿ ಕೊರಲೊಳಗಿಂದ ಹಾಡಬಹಳು.

ಸೋಬಾನದೀ ಹಾಡ ಸಾಮಗಾನದ ಒಳಗೆ
ಹನಿಹಸಿಯೆ ಓಂಕಾರ ನಾದ ಬಿಂದು
ಹಾಕೆ ಅಪೋಶನವ, ಅದನು ಸ್ವಾಹಾಕರಿಸಿ
ಸವಿಯುವುದು ಸೌಂದರ್ಯ ಸ್ವಾದವೊಂದು.

ಹಸಿದ ಹೊಟ್ಟೆಗೆ ಅನ್ನ ಉಣಬಡಿಪ ಹಣ್ಣಲ್ಲ,
ಸೌಂದರ್ಯವೆನ್ನುವುದು ಎದೆಯ ಮಾತು.
ಅದನರಿಯದಿದ್ದಾಗ ರೂಪುಲಾವಣ್ಯಕ್ಕೆ
ನೇತಾಡಿ ಜೋಲುವೆವು ಕಣ್ಣು ಸೋತು.

ಒಲವು ಚೆಲುವಿಗೆ ಬಣ್ಣ, ಇಲ್ಲದಿರೆ ಬರಿವಣ್ಣ,
ಮೂಕ ಮಾತಿನ ಕುಸುರು ಅದರ ಗೀತ;
ಸ್ವಾನಂದ ರಸರಂಗ, ಸ್ವರ್ಗ ಸೀಮೆಯ ಭೃಂಗ
ಭಾವವೆಚ್ಚರಿಸುತಿಹ ದೇವದೂತ !

ಮಧುರಸೀ ಹಾಡಿನಲಿ ಮರಿದುಂಬಿಗಳ ಹಾಗೆ
ರಸಗಂಧವನು ಹೀರೆ ತಿರುಗುತಿರಲು,
ಬೆಟ್ಟದಾ ಝರಿಯೊಂದು ಕಂದರಕೆ ಉರುಳುವೊಲು
ಮರಳುವವು ಹೊಸಹಬ್ಬ ಹೊಸ ಋತುಗಳು.

ಚೈತ್ರ ಕುದುರೆಯನೇರಿ ನಡೆತರುವ ಹೊಸಗುವರ
ಹಣ್ಣಿಸುವ ಹೊಸಬಾಳ ಒಸಗೆಯನ್ನು:
‘ ಸುಖ ದುಃಖ ಸಂಗಮದ ಬೇವು ಬೆಲ್ಲವ ನಾಂದು
ತಂದಿಹೆನು ತೆರೆಯಿರೋ ಬೊಗಸೆಯನ್ನು. ’

ಆದ ಸವಿದು ಸಮ ವಿಷಮ ಭಾವಗಳ ಪಡಿಯಾಗಿ
ಕಟ್ಟಿಗೆಯ ಲಗ್ಗೆಗಳ ಕೊತ್ತಳವನೆ
ಏರಿಸೇರಿಸೆ ಹಗಲ ಹೋರಾಟ ಮರೆವಾಟ,
ಚೆಂಡು ಬೆನ್ನನು ಮೆಟ್ಟಿ ಅಟ್ಟಿದುದೆನೆ.

ಮಾಮರವು ಉಲಿಯುವುದು, ನಾಡೆಲ್ಲ ನಲಿಯುವುದು,
ಹೂವಿಳ್ಯ ಗೌರಿಯನು ಸ್ವಾಗತಿಸಲು
ಹುಡಿಯೆ ಹೂ-ಮಿಡಿಯಾಗಿ ನಲುವಳ್ಳಿ ಕುಡಿಯಾಗ
ಗುಡಿ ಮುಡಿಗಳೆಲ್ಲಲ್ಲು ಒಂದೆ ಎನಲು.

ಬಿಸಿಲ ಬಂಟನ ಒಗರು ಇನ್ನು ಇಳಿಯದ ಡಿಗಿರು
ಎದೆಯ ಉಬ್ಬಿಸಿಕೊಂಡು ಕಾಲು ಹಾಕೆ,
ರಾಮನವಮಿಯ ಸತ್ರ ಗರಿಯ ನೆಳಲಿನ ಪತ್ರ;
ತಣ್ಣೀರ ಪಾನಕಕೆ ಅಮೃತ ತೂಕೆ ?

ದವನ ಹುಣ್ಣಿವೆ ಬರಲು ದಣಿವು ಅಡಗುವುದಲ್ಲಿ
ಹಂಪೆ ಕೊಂಪೆಯ ಜಾತ್ರೆ ಯಾತ್ರೆಗಾಗಿ,
ಮೆಯ್ಯು ಬಲು ಹುರಿಯಾಗಿ ಕಾಸರಿಕೆ ಕಿರಿಯಾಗಿ
ಕೇಕೆ ಹಾಕಿರೆ ಮಂದಿ ಕ್ಷಾತ್ರರಾಗಿ.

ಇರುಳ ಮೈ ನರೆದಂತೆ ಒಲವ ಮಳೆ ಸುರಿದಂತೆ
ಹೊಸ ಗಂಧ ಹುಲುಸಾಗಿ ಹರಿಯುವಂತೆ
ಕೋಗಿಲೆಯ ಪಂಚಮದ ರಸವಾಣಿ ಮುತ್ತುಂಡು
ಬೆಳುದಿಂಗಳಲ್ಲಲ್ಲಿ ಹನಿವುದಿಂತೆ.

ದಿನದ ಮೆಟ್ಟಿಲಿನಂಕೆ ತಿಂಗಳಿನ ಗಡಿ ಸೋಂಕೆ
ಬಸವ ಹುಟ್ಟಿದ ಹಬ್ಬ ಮಲರುವಂತೆ
ಮನೆ ಮನೆಗು ಯುಗಪುರುಷ ಋತುರಾಜ ತಾನಾಗಿ
ದಯದ ಧರ್ಮಕೆ ಬರುವ ಯೋಗಿಯಂತೆ.

ಮದುವೆ ಧ್ವಜಪಟ ಹಿಡಿದು ಅಂಗಳದ ಹಂದರವು
ಅಂತರದಿ ಸೋಗೆಯನು ತೂಗುತಿರಲು
ತೆಂಕಣದ ಬಿರುಗಾಳಿ ಭೋರೆಂದು ಗರ್ಜಿಸುತೆ
ದಾಳಿಡಲು ಆಗುವುದು ತೇಲು ಮೇಲು.

ಕಾರ್ಮುಗಿಲ ಬಳಿಗೊಂಡು ಕಾರಹುಣ್ಣಿವೆ ಬಂದು
ಸಾಗರದ ರೋದನಕೆ ಶ್ರುತಿ ಹಿಡಿದಿದೆ.
ಯಾಗಸಂಭವೆ ತೆರೆದ ಕಿಡಿಗಣ್ಣ ಬೆಂಕಿಯೊಲು
ಮಿಂಚುರಂಚಿನ ಸೆಳಕು ಕುಡಿವಡೆದಿದೆ.

ಕಾಗೆ ಕಡುಬನು ಕಚ್ಚಿ ಹಾರಲಾರದ ಪರಿಗೆ
ಮುಂಗಾರ ಹೊಳೆನೀರು ತುಂಬಿ ಬರಲು
ಕಾಶಿ ಭಾಗೀರಥಿಯೆ ಇಲ್ಲಿ ಪುಣ್ಯದಿ ಸಂದು
ಕೋಟಿ ಪಾಪವನೆಲ್ಲ ತೊಳೆಯಬಹಳು.

ಆಷಾಢ ಕೈವಾಡ ಆನೆ ಪಡೆಯೊಲು ಮೋಡ
ಈಸಾಡಿ ಸೋನೆಮಳೆ ಹಸಿಹಸಿಸಿರಿ
ಗ್ರೀಷ್ಮವದು ಶರಣೆಂದು ಮರಳಿ ತೆರಳಿತೊ ಏನೊ,
ಮುತ್ತೈದೆ ಹೊಲವೆಣ್ಣು ಆಗ ಬಸಿರೆ.

ಗರ್ಭಿಣಿಯು ಬಯಸಿಹಳು ಶ್ರಾವಣದ ಸವಿವಾಸ,
ಹಸಿರು ಪೀತಾಂಬರವ ಉಟ್ಟಿರುವಳು.
ಕಾಮದೇವರ ಬಿಲ್ಲು ನವರತ್ನ ಸರವಾಗೆ
ತಾವರೆಯ ಮುಖತಿಲಕವಿಟ್ಟಿರುವಳು.

ನಾಗಪಂಚಮಿ ಬರಲು ತವರೆಲ್ಲ ತಂಬಿಟ್ಟು
ತಿಂದುಂಡು ಜೋಕಾಲಿ ಜೀಕುತಿಹುದು.
ಮೊದಲಗಿತ್ತಿಯು ತಾಯ ತೊಡೆಸೀರೆ ತೊಯ್ಸಂತೆ
ಅತ್ತತ್ತು ಅತ್ತೆಯನೆ ದೂರಬಹುದು.

ಬಾಳೊಂದು ಉಯ್ಯಾಲೆ, ಈ ಹಬ್ಬಕದು ಹೋಲೆ,
ನಾವವರ ಮಣಿಮಂಚ ಹತ್ತಿರುವೊಲೆ,
ಆಡುವೆವು ಹಾಡುವೆವು ಕೆದಕೆದಕಿ ನೋಡುವೆವು
ಹರಿದ ಹಗ್ಗದ ಚುಂಗ ಕಟ್ಟಿರುವೊಲೆ.

ಸಿರಿಯಾಳ ಸತ್ವವನು ಬಲ್ಲ ಹೆಂಗಸರೆಲ್ಲ
ಬುತ್ತಿ ಉಪ್ಪಿನಕಾಯ ಎಡೆಯ ಮಾಡೆ
ಹುಡುಗ ಹುಡುಗಿಯರೆಲ್ಲ ಕೈ ಬಾಯ ಚಪ್ಪರಿಸೆ
'ಪುತ್ರಸಂತಾನ ಫಲ' ಹರಿದು ಪೀಡೆ.

ನೂಲ ಹುಣ್ಣಿವೆ ಗೆಲವು ಗೋಕರ್ಣ ನಾಡಿನಲಿ
ಕಡಲ ಮಾತೆಯ ಮಡಿಲ ಒಡಲಿನಲ್ಲಿ,
ಕಣ್ಣಿಗಳ ಕಡೆವಡೆಯೆ ನಾವೆಗಳ ಧೀಪಯಣ,
ಮೊದಲ ಮೂಹೂರ್ತಕ್ಕೆ ಪೂಜೆ ಸಲ್ಲಿ

ಜೆನಕ ಬಂದನು ಎಂದು ಜೆನಕಗಳು ಕಿಲಕಿಲನೆ
ನಕ್ಕುವೊಲು ಎಳೆಹಸುಳೆ ತೊದಲು ನುಡಿಯೆ,
ಕಾವ್ಯ ಕೋವಿದನಾತ ಆವರೊಡನೆ ಸಲೆ ಉಲಿದು
ಒಳ ಒಲವ ಸಮನಿಸುವ ಸಿದ್ಧಿ ಪಡೆಯೆ.

ಜೋಕುಮಾರನ ಹುಟ್ಟು ಜೋಗುಳವ ಹೇಳಿರಲು
ಜೋಳಜೆಳೆ ಎದೆವರೆಗು ಏರಬಹುದು.
ಚವತಿ ಬರವದು ಮೀರೆ ಎರೆಮಣ್ಣು ಬಾಯಾರೆ
ಬಾಂಪೇಪಿ-ಎದೆನೀರ ಹೀರುತಿಹುದು.

ಗುಡುಗು ಸಿಡಿಲಿನ ಬೆಡಗು ಬಲು ನಡುಗಿ ಕಳೆಯುಡುಗಿ
ಆಡಗಿರಲು ಸುಮ್ಮನೆಯೆ ಎತ್ತೊ ಓಡಿ,
ವರ್ಷಕಾಲದ ಹರ್ಷ ಹಂಬಲವೆ ಹಾಲಾಗೆ
ಬಳಕುವವು ತೆನೆ ಜೇನು ಹೂವು ಆಡಿ.

ಕುರುಡು ಚಿತ್ತಿಯ ಮಳೆಗೆ ಚಿತ್ತವೇ ಕುರುಡಹುದು,
ಮನೆಯಲ್ಲ ಮನವೆಲ್ಲ ಮೌನವೆನ್ನೆ.
ಮಾನವಮಿ ದುಂದುಭಿಯು ವಿಜಯಭೇರಿಯ ಮೊಳಗೆ
ಬನ್ನಿ ಮುಡಿವುದು ನನ್ನಿ ಬಳಸಿತೆನ್ನೆ.

ಸೀಗೆ ಹುಣ್ಣಿವೆ ಬಂದು ವೈಸೀಗೆ ತೊಳೆಯುವುದು,
ಕುಳಿಗಾಳಿ ಕೆಲೆಯುತಿರೆ ಬಹುದು ಶರದ.
ಕಾಯ ಸವೆಸಿದ ಫಲಕೆ ಹೊಲವೆಲ್ಲ ಹೊಡೆಯಾಗೆ
ಹೊನ್ನಹುದು ನೆಲದವಗೆ—ಏನು ಬಿನದ!

ಹುಗ್ಗಿ ಹೋಳಿಗೆ ಅಡಿಗೆ, ತುಂಬಿ ಹೋಹುದು ಹೆಡಿಗೆ
ಬಂಧು ಬಳಗವು ಬಹಳ ನೆರೆಯಲಲ್ಲಿ.
ಭೂಮಿದೇವಿಯ ಪದಕೆ ನೈವೇದ್ಯವಾಗಲದು
ಹಿಗ್ಗ ಹಿಡಿಯಲುಬಹುದೆ, ಎದೆಯ ಜಲ್ಲಿ?

ವಾಮನನ ಅವತಾರ ಬಲಿಯ ತಲೆಯನೆ ತುಳಿದು
ಉದ್ಧರಿಸೆ ಅದ ನೆನೆದ ಪಾಡ್ಯ ತಿಥಿಗೆ
ದೀಪಮಾಲೆಗಳೆನಿತೊ ಊರ ಕೇರಿಯ ಕೊರಳ
ಸಿಂಗರಿಸೆ, ಇರುಳಾಗ ದಿವದ ಗಳಿಗೆ!

ಉತ್ಥಾನ ದ್ವಾದಶಿಯ ಗೋಧೂಳಿ ಸಮಯವಲಿ
ಗೋಪಾಲ ತುಳಸಿಯರ ಧಾರೆಗೆಂದು
ಗೋವು ಕರುಗಳು ವೇದವೋದುವವು ಹಟ್ಟಿಯಲಿ
'ಅಂಬ ಅಂಬಾ' ಎಂದು ಮೆಲಕುವಂದು.

ಛಟ್ಟಿ ಹಬ್ಬದ ಬಂಧು ಬಿಟ್ಟೆ ಮೋಡದ ದಂಡು
ಒಟ್ಟಾಗಿ ಮುಗಿಲಿನಲಿ ಈಜುತಿರಲು
ದಿನ ಬಾಳ ಕಿರುಕುಳವು ಇದಕೆ ರೂಪಕವಹುದು,
ಅನುಭವದ ಧೃತಿವಾಣಿ ತೀಲಿಬಹಳು.

ಶಿಶಿರ ಋತು ಸೀಮೆಯಲಿ ಇಬ್ಬನಿಯ ಬಳುವಳಿಯು,
ಕಣದ ಬಳ್ಳಿಯು ಸೊಪ್ಪೆ ಮುತ್ತುಮುಡಿಯೆ.
ಹೊಸ್ತಿಲವ ಹುಣ್ಣಿವೆಯ ದಿಗ್ವಿಜಯ ಬರುತಿಹುದು
ಚಳಿರಾಯ ಚಾವಣಿಯ ಡೇರೆ ಹೊಡೆಯೆ.

ಬೆಳುದಿಂಗಳರ್ಕವನು ಅರೆದು ಹಾಲನು ಮಾಡಿ
ಹರಹಿದಾ ಬಣ್ಣವೆಯೆ ಬಿಸಿಲೆನುತಿರೆ,
ತೆರೆದ ಬೆನ್ನೆಲುಬೊಂದು ಕಾವ ಬೇಡಲು ಬಹುದು
ಜರಠನೆದೆ ಹಂದರವು ಬಲು ನಡುಗಿರೆ.

ರಾತ್ರಿ ಸೊಬಗಿನ ಬೀಡು, ಚಂದ್ರಲೋಕದ ಈಡು,
ಬೀದಿ ಬರೆದಿಹ ಚಿತ್ರ ರಮ್ಯಸೃಷ್ಟಿ.
ಕಾಡು ಬೆಳಕಿನ ನಾಡು, ಸುಗ್ಗಿಗುಣಿತಕೆ ಜೋಡು,
ಮೂಕ ಮಾತಿನ ಎದೆಗೆ ರಸದ ವೃಷ್ಟಿ.

‘ ಕುಣಿಯೋಣ ಬಾ ’ ಎಂದು ಕರೆಯೊಂದು ಮೊರೆಯುತಿರೆ
ಮುಗುದೆ ನಲ್ಲಗೆ ‘ ಒಲ್ಲೆ ’ ಎನ್ನಲರಿದು.
‘ ಬಾರೊ ಬಾರೆಲೊ ಜಾಣ ಕೈಯಲಿದೆ ಕಡಿವಾಣ ’
ಎಂದು ಬೆನ್ನನು ತೋರೆ ಏನು ಬಹುದು ?

ಒಂದೆ ಜೀವದ ಎರಡು ತನಿಜೋತಿ ಸಾಮ್ಯಕ್ಕೆ
ಹಂತಿ ಸುತ್ತಲು ಹಂತ ಹೂಡಿದಾಗ
ಗಾಳಿ ಬಿಟ್ಟಾಗೊಮ್ಮೆ ತೂರಿಕೊಳ್ಳುವ ದಾರಿ
ತೋರುವುದು ರಿಂಗಣದ ಭಾವದೋಷ.

‘ ಪ್ರೇಮ ’ ವೆನ್ನುವ ಸೊಲ್ಲು ಕಾಮಕ್ಕೆ ದನಿಯಲ್ಲ,
ಸುತ್ತು ಜೊನ್ನದ ಜಾಡು ಹಿಡಿದ ಗುಡಿಯು.
ಎದೆ-ಹುಲ್ಲ ಕಾವಿನಲಿ ಹಣ್ಣಾದ ಒಲವೊಂಧ
ಬಣ್ಣಿಸಲು ಈ ಕುಂಚ ಅಮರ ನುಡಿಯು.

ದಣಿದವರ ತಣಿಯಿಸಲು ಇನಿಜನರ ಅರಳು ಮೊಗ
ಜೇನ್ನೊಣದ ಹಸಿಗಿಂತ ಸವಿಯೆ ಅಹುದು.
ಒಬ್ಬರೊಬ್ಬರ ನೋಡಿ ಕೊರಳ ತುಸ ಜೋಲಿದರೆ
ಹಾಲ್ಗಡಲ ಹುಳಿಬಿಂದುವೆನ್ನಬಹುದು.

ಯಾವ ರಾಗವದೇನು ಅನುರಾಗವಾಗಿರಲು
ಆ ದಿವ್ಯಯೋಗಕ್ಕೆ ವಿಽರಾಗವೆ ?
ಮಾಗಿ ಬಂದರದೇನು, ಭೋಗಿ ಹೋದರದೇನು,
ಶುಷ್ಕ ಪುಷ್ಯದ ಕತೆಗೆ ಕೋಡು ಬಹವೆ ?

ಶಿವರಾತ್ರಿ ತಂಗಿರಲು ಸೀಳು ಮಾವಿನಕಾಯಿ,
ಬಿಸಿಲು ಬೆಸಲೆಯದಾಗೆ ಹೇಮಂತಕೆ,
ಲೋಕನಾಥನ ಬರವು ಲೋಕಕ್ಕೆ ಹಿರಿದಹುದು
ತಾಪ ಕೋಪಗಳಂಜಿ ಶಿವಶೂಲಕೆ.

ಹೋಳಿ ಹಬ್ಬದ ಹಾಡು ಹಾಳೆಂದು ಹೇಳುವುದು
ಕಾವಿ ಬಟ್ಟೆಯ ಹೇವ, ಬೇರೆಯೇನು ?
ಹದ ಮೀರಿ ಕಲಸಿದರೆ ಹುಸಿಯ ಉಪ್ಪಿನಕಾಯ
ಹುಳು ಹಿಡಿಯದುಳಿಯುವುದೆ ? ಮಾಣು ಮಾಣು !

ಸಾಗಿರಲು ಋತುಮಾನ ಅದರೊಡನೆ ಈ ಗಾನ
ವೀಣಾಪಿತಾನಕ್ಕೆ ದೇವಧ್ಯಾನ.
ತಾಳ, ಲಯ ರಸ ಭಂಗಿ ಜೀವ ಜೀವದ ಸಂಗಿ,
ಬಾಂದಳವ ಆಳುವುದು ಇಂಥ ತ್ರಾಣ!

ವರುಷಕೊಂದೋ ಎರಡೊ ಗ್ರಹಣಗಳು ಬರಬಹುದು,
ಅರ್ಧ ದಿನದಾ ಪೀಡೆ ಲೆಕ್ಕವುಂಟೆ ?
ಜಪತಪವೊ ವಿಭೂತಿ ಈಶ-ಸಂಕೀರ್ತನೆಯೊ,
ಮಂತ್ರತಂತ್ರಗಳೆದುರು ಉಳಿವುದುಂಟೆ ?

ಇಂತಿರಲು ಎಳೆ ಬಾಳು ಶುಕ್ಲಪಕ್ಷದ ಇರುಳು
ಹೋಳಿಹುಣ್ಣಿವೆಯದಕೆ ಕಳಸವಾಗೆ,
ಮುಂದಿರಲು ಕಡುಬಿಸಿಲು ಕೃಷ್ಣಪಕ್ಷದ ಮರುಳು,
ಉಸಿರುವೆನು ತುಸ ತಡೆದು—ಏನೊ ಹಾಗೆ!

*   *   *

# ಕೃಷ್ಣಪಕ್ಷ



## ಮೊದಲನೆಯ ಅಷ್ಟಕ

" ಎಲೆಲೆ ಬಾಳಿನ ಅಳಲ ಆತ್ಮದೀಪಿಕೆಯನ್ನು
ಹೃದಯವೀಣಾಮುಖದಿ ಹೇಳುವವರ,
ತಮ್ಮ ಘನ ಮೋನಕ್ಕೆ ಸಾಟಿಯೇ ಈ ಗಾನ ?
ಏನೊ ಕೃಪೆ, ಬಡನುಡಿಯ ಕೇಳುತಿಹರ ?

ಋತುಗತಿಯ ಹಿತ-ಮಿತಕೆ ಜೀವನವು ಬಲು ಹವಣ,
ಸ್ಥಿತಿ ತುಸುವೆ ಸಟೆಯಾಗೆ ಸೋಲೆ ತವರು.
ಅಧಿಕ ಮಾಸಗಳೆಸಿತೊ ಕುರುಡು ಭಾಸಗಳೆಸಿತೊ
ಅಳವಡಲು ಗ್ರಹಮಾನ ಭ್ರಮೆಯ ಸದರು.

ಫಾಲ್ಗುಣದ ಉರಿವಿಸಲು ಶ್ರಾವಣವ ಸಂಧಿಸಲು
ತತಿಕಾಲವೆಂಬುವುದೆ ಮರವೆಯಾಗಿ
ವರುಷವೆಂಬುವುದೆಲ್ಲ ಸುಟ್ಟುರಿಯ ನೆಲೆಯಹುದು,
ಭೂತಗಂಬದ ಲಾಸ್ಯ ಅಲ್ಲಿ ಸಾಗಿ.

ದಿನದ ಬದುಕಿನ ಹೊಲಕೆ ಈ ಗಾಳಿ ಗೂಳಿಯೊಲು
ದಾಳಿಡಲು ಗೋಳದನು ಹೇಳಲಾರೆ.
ಕಾಯಲಿಹ ಬಾಗಿಲವೆ ಸೀಳಿ ಬೀಳಲದಾಗ
ಹೋಳಾದ ಹಾಳುಮನೆ ತಾಳ ಬೇರೆ.

ಬಿದಿಯ ಮುನಿಸಿದು ಎನಲೊ ? ಸೊಗದ ಶುಭ ಗಳಿಗೆಯನೆ
ಕದಿಯುವಾ ಕವಡುತನ ಅವನಿಗೇಕೆ ?
ನಮ್ಮ ಪುಣ್ಯದ ಸಮಯ ತನ್ನಗಡಿ ಕಂಡಿರಲು
‘ ಮರಳಿ ನೀ ಬಾ ’ ರೆಂದು ಕರೆಯಬೇಕೆ ?

ಹೊತ್ತು ಸಾಧಿಸುತಿತ್ತು, ಛಲವ ಮಸೆಯುತಲಿತ್ತು.
ಮಿತ್ತು ಔಶಣವನ್ನು ಹೊತ್ತ ಪರಿಯೆ
ಅತಿಥಿಯೊಲು ಆಗಸೆಯಲಿ ನಿಮಿಷವೆಣಿಸುತಲಿರಲು
ಮಧುರ ಆದನೊ ಅದಕೆ ಸೊಡೆಯ ತೊರೆಯೆ !

ಅವನ ದೇವನ ಭಕುತಿ ಭಾವನೆಯ ವರ ಶಕುತಿ
ವಿಷಮಕಾಲದ ಮುಕುತಿಗಾಗಬಹುದೆ ?
ಊರ ಕೇರಿಯ ಮಾರಿ ಮಾದೇವಿ ರಣಚಂಡಿ
ಇನ್ನಾರೊ ಮನೆ ಸೇರಿ ಕರುಬಲಿಹುದೆ ?

ಎದೆ ಗುಡುಗಿ ನಡಗುತಿದೆ, ಕದನವನು ತೊಡಗುತಿವೆ,
ಮಿಂಚು ಮೂಗಿನ ತುದಿಗೆ ತೂಗುತಿಹುದು.
ಸಂಜೆ ಹೊಸ್ತಿಲ ತಲುಪೆ ನಂಜು ಮೈಕಾಯಿಸಿದೆ,
ಬೆಂದ ಬದನೆಯ ಕಾಯಿ ಮೋರೆಯಹುದು.

ಹೇಡಿ ಮೋಡಗಳೆನಿತೊ ಮೊಗ ನೋಡಿ ಓಡಿದವು,
ಮಳೆಗರೆದು ಮೈಯುರಿಯ ತಣಿಸಲಿಲ್ಲ.
ನಾಡ ಧನ್ವಂತರಿಯೆ ಕಾಡ ಮದ್ದನು ತಿನಿಸೆ
ಮಧುರನೊಳಗುದಿ-ಕದನ ಮಣಿಯಲಿಲ್ಲ.

ತಾಯಿ ಶ್ಯಾಮಲದೇವಿ ತೊಡೆಯೊಂದು ಒರಗಾಗೆ
‘ ರಾಮ ರಾಮಾ ’ ಎಂದು ಭಜಿಸುವಾಗೆ
ಅವಳ ಮಂಗಲದುಸಿರು ತಡೆತಡೆದು ಶ್ರುತಿಹಿಡಿದು
ದನಿಯ ಕೂಡಿಸುತಿಹುದು ಏನೊ ಹಾಗೆ.

‘ ಸಾವಿತ್ರಿ ಮಾತಾಯಿ ಬಾರವ್ವ ನೀ ಕಾಯಿ,
ಕೊರಳ ಕರಿಮಣಿಯನ್ನು ಉಳಿಸಬಾರ.
ಮತ್ತೊಮ್ಮೆ ಯಮರಾಜನೊಡನೆ ಕಾದಲು ನಿಂದು
ಹಣೆಯ ಸೌಭಾಗ್ಯವನು ಕಾಯ್ದು ತೋರ.

ಇಂತವಳ ಒಳಹಾಡು ತೋಡಿ ತನ್ನಯ ಪಾಡು
ಸತಿದೇವಿಯರನೆಲ್ಲ ಸ್ತುತಿಸುತಿರಲು
ನಾನವನ ಕಾಲ ಬಳಿ, ತಂಗಿ ತುಸ ಮೂಲೆಯಲಿ,
ಮೂಕ ವೇದನೆ ಮುಖವ ಮುಚ್ಚುತಿರಲು.

ಸರಿಯಿರುಳು ಸಮನಿಸಲು ಸುತ್ತೆಲ್ಲ ಕರಿ ನೆಳಲು,
ಹರಕು ಹಣತೆಯು ಬೆಳಗೆ ಹೆಣಗುತಿಹುದು.
ಮಧುರನಾ ಪ್ರಾಣ ಗುಡಿ ಜೀವ ದೀವಿಗೆ ಜ್ಯೋತಿ
ಅದಕೆ ಮೇಳವದಾಗಿ ಮಿಣುಗುತಿಹುದು.

ಇರುತಿರುತೆ ಆದೊ ಕರುಣೆ ಇನಿಮಳೆಯ ಕರೆಯಿತೆನೆ,
ಅರಳಿತಲ ಕೋರಕದ ಅವನ ಮುಖವು !
ಉಲ್ಲಸವೆ ಮುದತಳೆದು ಸರಬರಾಯಿಯ ಸಲಿಸೆ
ಅವನೆಂತು ಗ್ರಹಿಸುವುದು ‘ ಕೃತಕ ಸುಖವು. ’

ಸಾವನೆಮುಗ್ಗೊಳಲೆಂದು ಏಸೇಸೊ ಮರುಳುಗಳು
ಮನ ಕಣ್ಣು ಮಾಯೆಯಲಿ ಮೋಹತಹವು.
ಹಳೆದಿನವ ರಸ-ನನಸು ಅಳಿದುಳಿದ ಕನಸಿನಲಿ
ಕಳೆಗೊಂಡು ನವಿರುಣಿಸಿ ಮರಳುತಿಹವು.

ಈ ತೆರನ ದ್ವಂದ್ವದಲಿ ಅರೆಮುರಿದ ಅವನುಸಿರು
ಮೃದುಲ ಸಂದೇಶವನು ಒರೆಯುತಿಹುದು.
'ಎಲೆ ಚೆನ್ನ ನೀ ಬಾಳ ಅನುಗೋಲಿಹೆಯಣ್ಣ,
ಬಹ ಕಾಲ ಸೊಗ ಬಯಸಿ ಹರಸಬಹುದು.'

ಆಹಿತಹ ಕೊನೆಯ ಆ ಶುಭದ ಸಂದೇಶದೊಡೆ
ತಂದೆ ಮಕ್ಕಳ ದಿವ್ಯ ಸ್ನೇಹಯೋಗ.
ನೀಳು ದೃಷ್ಟಿಗಳೆರಡು ಹೊಸಲಾಗಿ ಸಂಗಮಿಸೆ
ಪುಣ್ಯಕಾಲಕೆ ಸಂದುದಾ ವಿಯೋಗ.

ಮುಗಿಯಿತಾ ಯೋಗಿವರ ಕೈಕೊಂಡ ಯಾತ್ರೆಯದು
ಮರಳಿ ತನ್ನೂರಿಗೆಯೆ ಹೊರಟುಹೋದ.
ಆದರೇನದು ಇಲ್ಲಿ ಪ್ರಳಯವೇ ಇಳಿದಿಹುದು,
ಮುಗಿಲು ತಲೆಯನು ಆದುಮಿದೀ ಅಗಾಧ!

ತಾಯಿ ನೆಲುವಿನೊಳಟ್ಟ ನಯನಾಶ್ರುಭರಣೆಗಳು
ಒಡೆದು ಸೋರಿದ ಪರಿಗೆ ಅಳುತಲಿಹಳು.
ಭೋರಾಟ ಚೀರಾಟ ಬ್ರಹ್ಮದೇವರ ಕಾಟ,
ಮನೆಯೆಲ್ಲ ಮಸಣವೆಯೆ, ದೆವ್ವ-ಮಹಲು.

ಸತಿಯ ಎದೆ-ದೇಗುಲದಿ ಪತಿಯೆ ನಿಜ ಪರಮಾತ್ಮ,
ಆಳು ಸ್ವಾಮಿಯು ಅಹುದು, ಒಂದೆ ಜೀವ.
ಇವಳವಗೆ ಒಡನಾಡಿ, ಎರಡು ಅಂಬಕ ಜೋಡಿ,
ವಿರಹದಳಲನು ತಡೆಯೆ ಹುಚ್ಚು ಹೇವ.

ಕಾಲ ತಾ ಕಾಯುವುದೆ ಬಾಳೊಂದು ಬೇಯುತಿರೆ ?
ಅದಕೇನು ಕರುಳಿಹುದೆ ?-ತಿರುಗು-ಯಂತ್ರ !
ನಮ್ಮ ನೋಣಿನ ಹುರಿಯು ಅದಕೆ ಕಣ್ಣಿಯದೇನು ?
ಎಲ್ಲಿ ಕಟ್ಟನು ಕೆಡೆದುದಾ ಸ್ವತಂತ್ರ !

ಬರಬಹುದು ಬೇರೊಂದು ಹೊಸತು ಸಂವತ್ಸರವು,
ಹಳಸಿದಾ ಹಬ್ಬಗಳು, ಅವೆ ಋತುಗಳು.
ಕಾಂಬ ಕಣ್ಣುಗಳಿರದೆ ಸವಿಯು ನಾಲಗೆಯಿರದೆ
ಬದುಕುವವೆ ಬೀತಂಥ ಬರು ತಿಥಿಗಳು ?

ನಡತರುವ ಯುಗಪುರುಷ ಮುನಿದೆದ್ದ ಹಾವಿನೊಲು
ಬೇವು-ಬೆಲ್ಲವಿದೆಂದು ಕೊಡುತಲಿರಲು
ಬೇವೆ ಬಾಳಿನ ಮುಖಕೆ ಬೆಲ್ಲಕ್ಕು ಸವಿಯಾಗೆ
ಸೆಣಸುತಿದೆ ತುಟಿಗಂಟೆ ಒಸರುತಿರಲು.

ಹೂವಿಳ್ಯ ಗೌರವ್ವ ಹೂವೆಂದು ಹಲುಬುತಿರೆ
ಹೃದಯ ನಿಷ್ಠುರ ಗರುವ ಮರಳುವಂತೆ
ಹಿತ್ತಲಿನ ಸಂಪಗೆಯು ಸೀದು ಹೊಟ್ಟನು ತಳೆದು,
ಉದುರುತಿವೆ ಎಲೆ ಕಣವು ಮಳಲಿನಂತೆ.

ಯಾವ ಪಾನಕ-ನೇಹ ಮಷ್ಣದಾಹ ತಣಿಯಿಸದು,
ಬೇಸಿಗೆಯ ಬಿಸಿಲದಕೆ ಅಲ್ಪವಹುದು.
ಒಳಗಿದ್ದ ವಡವಾಗ್ನಿ ಮೈಮನೆಯ ಸುಡುತಿರಲು
ಹೂತ ತರು ತಂಗಾಳಿ ಎಲ್ಲ ಬರಿದು.

ದವನ ಹುಣ್ಣಿವೆ ಬರಲು ಬವಣೆ ರಾವಣನಾಗಿ
ಹೃದಯ ವಿದ್ರಾವಣಕೆ ಕಾರಣವೆನೆ
ಕರುಳು ಖಳಖಳಿಸಿಹುದು, ಇರುಳು ಹಳಹಳಿಸಿಹುದು;
ಸುಡುಗಾಡೆ ಸುಖವೆಂದು ತೆರಳಬಹೆನೆ.

ಬೆಳುದಿಂಗಳೆನ್ನುವುದು ಕ್ಷಯರೋಗಿ ಮೋರೆಯೊಲು
ಬಾಡಿ ಬಿಳುಪೇರಿಹುದು, ಎನ್ನಬಹುದೆ?
ಅಗಲುದ್ದ ತಿರೆ ತಾನು ಮೋನದಲಿ ಮಡುಗಿರಲು
ಕಳೆವರದ ಹೊದಿಕೆಯೊಲು ಕಾಣುತಿಹುದೆ?

ಕಾಗೆಗಳು ಗೂಗೆಗಳು ಕಾವಲಿಗೆ ಕಾಯ್ದಿರಲು
ತೊವಲಿ ಬಾವಲಿ ಅಲ್ಲಿ ಒರಲುತಿಹವೆ.
ಭೂತ ಬೇತಾಳಗಳು ಎಲು-ತಾಳ ಮೇಳದಲಿ
ಶಿವನ ತಾಂಡವ ನೆನೆದು ಕುಣಿಯುತಿಹವೆ.

ಅಕಟಕಟ, ಇದ ನುಡಿದು ನಿಮ್ಮೆದೆಯ ನಡುಗಿಸಲೆ?
ಎನ್ನ ಮೈ ಮನವೆಲ್ಲ ಜುಮ್ಮೆನುವುದು.
ಸಾಧು ಪಿತ, ಅವನಸುವು ನರಕದಲಿ ನರಳುವುದೆ?
ಸಲ್ಲದದು, ಆ ಲೋಕ ಬೇರೆಯಿಹುದು.

ಇದು ಅನಾದಿಯಲಿಂದ ಬಂದ ಬಾಳಿನ ಬಗೆಯು,
ಜೀವಿ ಜೀವನ ಕೂಡ ಕರಗುತಿಹನು.
ಈ ಅನಂತದ ಐದು ದೇವಭವಗಳ ಅಡಿಗೆ
ತವಸಿ ಹರುಷದಲಿಂದ ಎರಗುತಿಹನು.

ಏಕ ಬದುಕಿನ ಬಂಧು ವಿಶ್ವಭಾವವ ಕೊಂಡು,
ನಕ್ಷತ್ರಲೋಕವನೆ ಅರಸುತಿಹನು.
ತನ್ನ ಪಂಥದ ಗೆಲವ ಬಯಸಿ ಬಳಸುತೆ ಒಲವ
ಅಮರ ಪದವಿಯನೊಂದ ಮೆರೆಸುತಿಹನು.

ಅಲ್ಲಿ ಮೋಡದ ಗೆಳೆಯ ಸ್ನೇಹದೂತ್ಯವ ಹಿಡಿದು
ಮೊದಲ ತವರಿನ ಗುಡಿಯ ಅಗಸೆಗಿಳಿದು
ಕ್ಷೇಮವಾರ್ತೆಯ ತಿಳುಹಿ ಹದುಳ ಮಳೆ ಸಲೆ ಸುರುಹಿ
ನಂಟರಿಷ್ಟರ ಮನಸ ತಣಿಸಬಹುದು.

ಅವನ ಹದ್-ಗತ ವೀಣೆ ಸಪ್ತಸ್ವರಗಳ ಕೋದು
ಚಿತ್ರಸೃಷ್ಟಿಯಲೇಕ ಚಕ್ರವಾಗಿ
ವಿಕ್ರಮನ ಬಲಗೊಂಡು ಸತ್-ಕ್ರಮದ ಮಾರ್ಗವನು
ಬಿತ್ತರಿಸುತಿದೆ ವೇದವಾಣಿಯಾಗಿ.

ಇಂತೊಂದು ಶುಭಜನಿತ ಭಾವನೆಯ ಬೆಳಗೊಡೆಯ
ನೆಳಲ ಮಂದಿರದೊಳಗೆ ಬುದ್ಧಿವಾಗಿ
ಬಾಳ ಬನ ಚಿಗುರಿತೆನೆ, ಮನ ಪಕ್ಕಗಳ ತಳೆದು
ಮತ್ತೆ ಹಾರುವುದಲ್ಲಿ ವಿಹಗವಾಗಿ

ಆಗೊಮ್ಮೆ ಈಗೊಮ್ಮೆ ತೂಗುವವು ಹಳೆ ನೆನಹು,
ಸೋಗುಗಾರನ ಪರಿಗೆ ಚಿತ್ತದೊಳಗೆ,
ವಾಗೀಂದ್ರ-ಜಾಲವದೊ ಯೋಗ-ಗಾರುಡಿಯಹುದೊ
ಮೇಗಾವ ಜೋಗ ಜಲಪಾತವಾಗೆ.

ಹೀಗೆ ಸಾಗಿರೆ ಹಗಲು ಇರುಳುಗಳ ಪರಿಭ್ರಮಣೆ
ದಿನವೇಸೊ ಕರಗುತಿವೆ ತಿಂಗಳಿನಲಿ.
ಆಗ ಬರುತಿರೆ ಮರಳಿ ಮದುವೆ ಮಾಸದ ಹರಲಿ
ಕರೆದಿಹುದು ನಿಬ್ಬಣವು ನೆರೆಮನೆಯಲಿ.

ಬರದ ರಸ ನಿಮಿಷಗಳು ಹರದಾರಿ ಮೂರೆಂದು
ಹೆರರ ಸೊಗ ಸಹಿಸದೆಯೆ ಮುಸಿಯುಬಹುದೆ ?
ಪೂರ್ವ ಜನುಮದ ಕರ್ಮಫಲವು ಬೆಂಬಳಿಸಿರಲು
ಕಲುಷದಲಿ ಬೇರೆಯರ ದೂರಬಹುದೆ ?

ತಿಳುವಳಿಕೆ ತಿಳಿಸೀತು ಕಲುಷಗಳ ತುಸ ತೊಳೆದು
ಮೆದುಳ ಬೇನೆಗೆ ನಸುವೆ ಪಥ್ಯವಹುದು.
ಆದರೂ ಚಿತ್ತದಲಿ ಗ್ಲಾನಿ ಅತಿ ಬೆಳೆದು ಬರೆ
ಉಮ್ಮಳವೆ ಹಳಹಳಿಸಿ ಹುಟ್ಟಬಹುದು.

ದೇಸಾಯ ಹಿರಿ ಮಗನು ಹೊಸಹಳ್ಳಿ ಯುವರಾಜ,
ಹಂಬಲದ ಹೆಸರವಗೆ 'ಚಂದ್ರಮೌಳಿ.'
ಚಂದ್ರಣ್ಣ ಚಂದ್ರಾಮ ಚಂದುರಾಯನು ಸರಿಯೆ,
ಊಳಿಗದ ಬಳಗದಲಿ ಮುದ್ದು-ಹೋಳಿ.

ಎಳೆಯ ಗೆಳೆತನದೊಳಗೆ ದಿನಬಳಕೆ ಬಲು ಸಲುಗೆ,
ಇಂದವಸು ಊರಮನೆ ಹರೆಯದರಸು.
ಬಂಗಾರ ಸಿಂಗಾರ ಮೈಯುಂಡ ಅಂಗಾರ,
ಕಂಡವರು ಮೊರೆಯುವರು: ' ದೊರೆಯೆ ಹರಸು.

ಅವಗೊರ್ವ ಭಾಮೆಯನೆ ಕರತರಲು ಸೀಮೆಯನೆ
ತಿರುತಿರುಗಿ ಹುಡುಕಿದರು ಒಳಗೆ ಹೊರಗೆ.
ಕರಿದೊ ಕುರುಡೋ ಕುಂಟೆ ಎಲ್ಲೆ ಮೀರಿದ ತಂಟೆ,
ಚೆಲುವೆ ನೀಲೆಗೆ ಆದ ಕೊನೆಗೆ ಬೆರಗೆ!

ಇದು ಸಹಜ ನಾ ಬಲ್ಲೆ ಹಸಿದ ಕಣ್ಣಿನ ಬೇಟೆ
ಹುಲ್ಲಿನಲಿ ಹೂವಾಗಿ ಅರಳಬಹುದು.
ಬಲೆಯ ಅಳವಿನ ಒಳಗೆ ಹುಲ್ಲೆ ಹಣಿಕದೆ ಇರಲು
ಹುಲಿ ಮೆಯ್ಯ ಹೊಕ್ಕಂತೆ ಕೆರಳಬಹುದು.

ಆಯಿತಾಯಿತು ಏನೊ ಯಾವ ಗಾಳವೊ ಕಣೆಯೊ
ಅವಳ ತಾಯ್ತಂದೆಯರ ಮನ ಹಿಡಿದಿದೆ.
ಕೆಂಪು ಹಂಚುಗಳಲ್ಲಿ ಮನೆಯ ಮಾಳಗೆಗುಂಟು,
ಇನ್ನೇನೊ ಹುಸಿ-ನೀರ ತಲೆ ಕುಡಿದಿದೆ.

ಮೌಳಿ-ನೀಲೆಯ ಮದುವೆ ನಾಳೆ ಮುಂಜಾವದಲಿ
ಬೆಳುಬೆಳಗು ಓಲಗವೆ ಒರಲುತಿಹುದು.
ನೆರೆಯ ತೆಂಗಿನ ಗರಿಯ ಮೋರೆ ಕಾಣದ ಕುನುಸು
ಮರುದಿನಕೆ ಮನೆ-ಸೂರ ಉರಿಸಬಹುದು.

ಸುಮುಹೂರ್ತ ಸನಿಹಿಸಲು ಪರಿವಾರ ನೆರೆದಿರಲು
ಅಕ್ಷತೆಯೊ ಕಿಡಿಗಳೊಲು ರಕ್ತವರ್ಣ.
ಗುರುತರದ ಗರುವದಲಿ ಹರಸಿದರು ಹಿರಿಜನರು,
ಕಂಡವರು ಯಾರವಳ ಅಕ್ಷಿಪರ್ಣ ?

ಅಕ್ಷತೆಯ ಮಳೆಯೊಳಗೆ ಅಶ್ರುಗಳ ಮುತ್ತುಗಳು,
ಮಂತ್ರಘೋಷವು ಕೆಣಕೆ ಕೊರಲು ಬಿಗಿದು
ಧ್ವನಿ ತೊಡದ ರೋದನದ ಸೀಲೆ ಒಳಗೆಯೆ ನೋಂದಿ
ಸೋತ ಆನನ-ರೂಹ ಹೇಳಬರದು.

ಏನಹಹ ಅವಳ ಮೊಗ ನಗೆಯ ಪುಷ್ಕರಣಿ ಕಣ !
ಎಂದೊಮ್ಮೆ ನಾನೇನೋ ನುಡಿದುದುಂಟು.
ಇಂದವಳ ದುರ್ಧರದ ಬಿಗುಮೊಗದ ಹೊಗೆ ಹೂವ
ಮೂಸ ಬಹ ಸಮಯವನು ನೆನೆಯಲೆಂತು ?

ನಮ್ಮ ಮನೆ ಓತ್ತಲಿನ ದಾಳಿಂಬ ಹಕ್ಕಿಯೊಂದು
ಅವಳ ಮನೆ ಗೋಡಲೆಯ ಗೋಡೆ ಬಳಿಗೆ
ನಸು ಜೋಲಿ ಒಳಗಿಣಿಕಿ ಕುಶಲ ಸುದ್ದಿಯ ಕೇಳಿ
ಗರುವಾಯಿಯಲಿ ಮರಳೆ ಹರುಷವೆನಗೆ.

ಎದೆಮಾತು ನಲುಮಾಡು ಮತ್ತೇಸೊ ಬಿರುದುಗಳ
ನಲುಮೆ-ಸುಡಿ ದಾಂಟಿಸುವ ದೋಣಿಯಾಗಿ
ಆ ತರುವೆ ನಮಗೆಂದು ನಂಟು ನೇಹವ ತಾಳಿ
ದೂತಕಾರ್ಯಕೆ ಬಹುದು ಮುಗ್ಧವಾಗಿ.

‘ ಅದು ಪುರಾಣದ ಕಾಲ ’ ಎಂದು ಮರೆಯುವ ಮಾತೆ ?
ಮೂರು ತಿಂಗಳ ಹಿಂದೆ ಒಂದು ಸಂಜೆ
ಗೋಧೂಳಿ ಸಮಯದಲಿ ಹೊನ್ನೆಲೆಯ ಸಾಕ್ಷಿಯಲಿ
ಕೈಕೈಯ ಹಿಡಿದುದನು ಹೇಳಲಂಜೆ.

ಎಳೆ ಗಾಳಿ ಸುಳಿದಿಹುದು, ಮಧುಪ ಸವಿ ನುಡಿದಿಹುದು,
ಕಮ್ಮೆಣ್ಣೆ ಮನ ಪೂಸಿ ಎರೆಯುತಿಹುದು.
ಮುತ್ತು ಮಾಯೆಗೆ ಸಿಲುಕಿ ಕತ್ತು ಬಾಗಿರಲಾಗ
ಹೊತ್ತು ಗೊತ್ತಿನ ಅರಿವೆ ಮರೆಯಬಹುದು.

ಆಶೆ-ಕುಸುರನು ಬಿಡಿಸಿ ಭಾಷೆ-ಕುಂದಣ ತೊಡಿಸಿ
ಕೊರಳ ಪುತ್ತಳಿ ಸರವ ನಾನಿರಿಸಿದೆ.
ಬಳ್ಳಿ ಮಂಟಪ ಜಾಜಿ ಮಲ್ಲಿಗೆಯ ಮಕರಂದ
ಹುಡಿಮೂರಿ ಬಹ ಬಾಳ ಶುಭ ಮೆರೆಸಿದೆ.

ಏನ ಬೆಸಸಲಿದೀಗ ಕಾದ ತರು ಲತೆಗಳೊಳು
ಕಾದಲೆಯ ನೀಳುಸಿರ ರುಕ್ಷ ಕಥೆಯ.
ಘನ ಸಮಾಜದ ರಾಜ ತೇಜದೋಜದ ಸಾಜ,
ಇಂತೆಂದು ಜೀರ್ಣಿಸಲೆ ಎದೆಯ ವ್ಯಥೆಯ ?

ಅರೆರೆ ಮದುವೆಯದೇನು ಜೋಯಿಸರ ಹೊತ್ತಗೆಯೊ,
ದೈವ ಪಂಚಾಯತಿಯ ಲೆಕ್ಕ ಕರಡೆ ?
ಶತಮಾನ ವಾಳಲಿಹ ಬಾಳ ಮೊದಲಿನ ಮಿಲನ
ನನ್ನಿ-ಸೊನ್ನೆಯು ಎನಿಸೆ ಬದುಕು ಬರಡೆ !

ಒಂದೆ ದೇಹದ ಗುಡಿಯ ಎರಡು ಕಾಲ್-ಕಂಬಗಳು,
ತುಸ ಕುಂಟಿ ಘನ ಕಾಯ ಹೆಳವನಹುದು.
ಇಂತು ಸತಿ ಪತಿ ಚೆಂದ, ತರವಲ್ಲ ಅತಿ ಬಂಧ,
ಬಿದಿರೆರಡು ಮಸೆದಾಡೆ ಬೆಂಕಿಯಹುದು.

‘ ಬಡವ ಮೆಚ್ಚಿದ ಹೆಣ್ಣು ಬದುಕಿನಲಿ ಘನ ತೊಡಕು ’
ಎಂಬ ಗುಜುಗುಜು ಸೊಲ್ಲ ಕೇಳಲಾರೆ.
ಬಡವ-ಬಲ್ಲಿದನೇನು ಧನಿಕ-ವಡ್ಡನದೇನು
ಒಲವು ಮತದಾಳೆಂದು ಹೇಳಲಾರೆ.

ಮರೆಯದೀ ಚೆಲು-ನುಡಿಯು ಏಳೇಳು ಜನುಮಕ್ಕು
ಪ್ರೀತಿ ಅಂತರ್ಜ್ಯೋತಿ ದಿವ್ಯ ಬೆಳಕು.
ಮದುವೆ ಪೂಜಾರಿಯೊಲು ದೀವಿಗೆಯ ಮೆರಸುವುದು,
ಇಲ್ಲದಿರೆ ಕಂದರವ ಸೇರಿ ಧುಮುಕು.

ಮಾತೇನೊ ಲೇಸಹುದು, ಮನದ ಮಂದಾರವದು,
ಮನುಮುನಿಯ ಮಹವಾಣಿ ಎನ್ನಬಹುದು.
ಕಾಯ್ದು ಹಂಚಿನ ಮೇಲೆ ಕುಳಿತು ತತ್ವದ ಮಾತೆ ?
ಸಿದ್ಧಾಂತ ರಾದ್ಧಾಂತವೆನಿಸುತಿಹುದು.

ಚಿತ್ತರಸ ದುಗುಡದಲಿ ಜಡವಾದ ಕಲ್ಲಹದು,
ಉರುಳಲಾರದು ಕೂಡ ದುಂಡೆಯಂತೆ.
ದುರ್ಬಲದ ದೊರೆಯಾಳು ಮರಳಿ ಒಡೆಯನ ಇರಿವ
ಪರಿಯಲ್ಲಿ ಕೊಲುತಲಿದೆ ಸ್ವಂತ ಚಿಂತೆ.

ಹೆರರೆದುರು ಸಾವಿರದ ಕುದುರೆ ಸರದಾರನೊಲು
ಲೋಕಾಂತಕೆದೆ ಗಟ್ಟಿ ನಿಲುವುದೊಮ್ಮೆ.
ಮನದ ಮಾಯೆಗೆ ಸಿಲುಕಿ ಕಣ್ಣು ಕತ್ತಲು ಹಿಡಿಯೆ
ಏಕಾಂತದೊಳು ಕೂಡ ಉಲಿಯಲಮ್ಮೆ.

ಚಿತ್ರಗುಪ್ತನ ವಹಿಯ ಚಿನ್ನ-ಹೆಸರಿನ ಹಾಳೆ
ಕನ್ನಡಕ ತೊಡುವನಕ ತಾಳಲುಂಟು.
ನೀಲೆ ಒಬ್ಬಳೆ ಇಹಳೆ ತಬ್ಬಲಿಯ ಜಗದೊಳಗೆ,
ತಾಯಿ ತಂಗಿಗು ನನಗು ಬದುಕು ಗಂಟು.

ಒಂದು ಮೈ ಚಳಿಕಳೆಯೆ ಹಲವಾರು ಮೈದೊಗಲ
ಹೊರುವ ಹಾವಿನ ಹದನ ಹಸನವಲ್ಲ,
ಬಲಿತ ತೋಳ್-ಹನಿ ರಕುತ ಸಾಯುವರ ಜೀವವನು
ಉಳಿಸೆ ಕಾಯಲು ಸೋಲೆ ವೆಸನವಿಲ್ಲ.

ಚೇತನೆಯು ಬಲ ಗೆಲವು ಚೈತ್ಯದೇವರ ಒಲವು,
ದಯವೆ ಹೃತ್-ಕಲಶವನು ತುಂಬಿ ಬರಲು
ಅದನು ಹಣಿಸಿದ ದಾನ ಕಂಡಿತದ ಕಾಯಕವೆ ?
ಜಿಪುಣ ಶೆಟ್ಟಿಯ ಬಾಳು ದಿಟವೆ, ಹೇಳು.

ಇಂತರಿವ ಮೆಲುಕಾಡಿ ಅರಗಿಸುವ ದಿನ ಬಾಳು
ದೀನನಾಥನ ಹರಕೆ ಗಳಿಸಬಹುದು.
ತಿಳಿ ಜಲದ ತೊರೆಯಲ್ಲಿ ಒಳಡಗೆಯ ತಣಿಯಿಸಲು
ಬೀಳಾದ ಹೊಲ ಮತ್ತೆ ಬೆಳೆಯುತಿಹುದು.

ಬೇಸಿಗೆಯ ನಡುಹಗಲ ಕುಡಿದು ಕಾದಿಹ ಶಿಲೆಯ
ಮೇಲಿನಿಸು ನೀರೆರಚೆ ಎಲ್ಲ ಉಗಿಯು.
ಹೀಗೆ ಪ್ರಾಯದ ಕಾವು ನೋವುಗಳ ಮಸಳಿಸಲು,
ಬದುಕು ಕುದಿಯಲಿ ಬೆಂದ ಬೇಳೆ-ತೊಗೆಯು !

ಅಳಿಮುಳಿದ ಮನ-ಮಿಡುಕು ಜೀವಕಂಟಿದ ನಂಟು,
ಕನಸಿನಲಿ ಕಳೆ ತಾಳಿ ಕಾಣಲುಂಟು.
" ಉಪವಾಸ ವ್ರತವಿರದೆ ಪಾರಣೆಯ ರುಚಿ ಬಹುದೆ ? "
ಎಂಬ ಅನಿಸಿಕೆ ಬಾಳ ಹೆಣೆದ ತಂತು.

ಆಡುವೆವು ಹಾಡುವೆವು ನಡುವೆ ನಸು ಕೂಡುವೆವು
ಸಂಸಾರ ಸುಖಸಾರ ಸರಿಬೆರಿಸಲು,
ಪಾರವಾರವೆ ಇರದ ವಾರಿಧಿಯ ಸೆರಗಿನಲಿ
ನೀರೇರಿ ಎದೆ-ದಂಡೆ ತರುಬುತಿರಲು.

ಏಸೊ ವೀರರ ಕಥೆಗೆ ವ್ರತನಿರತ ಸತಿಜನದ
ಪಾವನದ ಸಹಗತಿಗೆ ದನಿ ತೊಡಿಸಿದೆ.
ಶ್ಯಾಮಲೆಯ ಒಳುಭಾವ ಅಶ್ರುರಸದಲಿ ಚರಿಸೆ
ಮಾದ್ರಿ-ಕುಂತಿಯ ಒಗಟ ನಾ ಬಿಡಿಸಿದೆ.

ಏಕಲವ್ಯನ ಗುರಿಯ ಮೇರುಗಿರಿ-ಪದಕೆರಗಿ
ಬಿಲ್ಲು ಕಣೆಗಳು ಕೈಯ ಹಿಡಿಯೊಡೆಯಗೆ
ಸೋತು ಶರಣೆಂದಿರಲು, ಗುರು ಬಿದ್ದ ಸೆರೆ ಹರಿಯೆ
ಕಣ್ ಬಗೆದು ಕುರುಡಾದ—ಚಾಗ ಹೀಗೆ !

## ಸಿರಿಯಾಳು

ತನುವೆಲ್ಲ ಗದರುವುದು, ಓದೆ ಬಾಯ್ ಬೆದರುವುದು,
ಚಿತ್ತದುತ್ತರವನ್ನು ಬಯಸಬಹುದೆ ?
ತಳ್ಳಂಕದೊರತೆಯದು ಕಾರಂಜಿಯೊಲು ಪುಟಿದು
ಚಕ್ಷುಹಂಸನ ಚುಂಚ ಕದ ತೆರಸಿದೆ.

ಕಥೆಯ ಕಾವಣವೊಂದು ಚತುರ ಚಾವಣಿಯಹುದು,
ಊಹೆ-ಉದ್ಯಾನದೊಳ ಇತಿ-ಮಿತಿಯೊಳು.
ಅಲ್ಲಿ ಚಿಗುರಿದ ಬಳ್ಳಿ ಎನುವ ಬಗೆ ಎಳೆ ಲಲಿತೆ
ಮರಳಿ ಮೈ ಪುಲಕಿಸುತೆ ಅಲೆಯಬಹಳು.

ಅವಳ ಇರವಿನ ಪರಿಯು ಇಂದೊಂದು ಹೊಸ ತೆರವು,
ರಸರಹಿತ ಜೀವನದ ಜೋಗಿಯಲ್ಲ. ೮೫೨
ತಂಗಿ ಪ್ರಾಯದ ಸಂಗಿ ಹುಡುಗ ಬುದ್ಧಿಯು ಇಂಗಿ
ಕುಲಿನ ಕನ್ಯಾಕುಮುದ—ಬೇರೆಯಲ್ಲ.

ಯಾರದೋ ಮನೆ ರಾಜ್ಯ ಕಾರಭಾರವು ಏಕೆ,
ನಮ್ಮ ದಿನವಹಿ ಮೂಟೆ ಇರಲು ಭಾರ ?
ತನ್ನ ಅನ್ನದ ಮೇಲೆ ಕತ್ತೆ ಶವ ಉರುಳುತಿರೆ
ಹೆರರ ಎಡೆ ನೊಣ ಹೊಡೆಯೆ ಹುಚ್ಚು ಪೂರ.

ಇಂತೊಂದು ತಿಳುವಳಿಕೆ ಸೇರೆ ಬಾಳಿನ ಒಳಕೆ
ಗಳಿಕೆ-ಬಳಕೆಯ ಮಾತು ಮೊದಲಿನಂತೆ.
ಸಾಗಿರಲು ಹೊಳೆ ತೆಪ್ಪ ಯಾವ ಸೆಳವಿಗೊ ಬೆಪ್ಪ,
ಗಳ ಹಿಡಿದು ಎಣಿಸುವುದೆ ಮೂರ್ಖರಂತೆ ? ೮೬೦

ಹುಡುಗಾಟ ಮರೆಮಾಟ ಸುತ್ತುವರೆಯುತ ತೋಟ
ಪುತ್ತಿ ಮಂಗನ ಬೇಟವೆನ್ನಬಹುದೆ ?
ಮಾತಿನಲಿ ಮಹಿಪತಿಯು, ಮನೆಗೆ ಭಿಕ್ಷೆಯೆ ಗತಿಯು,
ಇಂತಿಹುದು ಅಪಹಾಸವೆಂದು ನೆನೆದೆ.

ಎದೆಯ ಹದ ಮಾಡಲಿಕೆ ಮನಸ ಹಸನಾಗಿಸಿ
ಹೊತ್ತಗೆಯ ಹಿರಿ ಬೀರ ತುಸ ತೆರೆದೆನು.
ಭೋಗ ಯೋಗದ ಭಾಗ ಸಾಗಲಾರದೆ ಕೊನೆಗೆ
ಬಾಳ ಬದುಕಿನ ನೆಳಲ ಬೆಂಬಿಳಿದೆನು.

ಜಗದ ಜಯಪದ ಪಡೆಯೆ ಜಾತ್ರೆ-ಪಯಣವ ಕೊಂಡ
'ಬಾಳಹಕ್ಕಿ' ಯ ಬೆನ್ನ ಸ್ವಾರಿ ಮಾಡಿ
ಅಲೆದೆ ಹಲಲೋಕಗಳ ನಿಮಿಷದಾಲೋಕನದಿ,
ಮರಳಿ ಇಳಿದೆನು ಇಳೆಗೆ ಅದರ ಜೋಡಿ.

ಯುಗವ ಗೋಲಿಯ ಮಾಡಿ ಆಡಿದೆನು ಕೆಲ ಕಾಲ,
ಘನ ಪುರಾಣದ ಪ್ರಾಣ ಹುರಿಯೊಡೆಸಿದೆ.
ಇತಿಹಾಸದೆತ್ತರಿನ ಹತ್ತಿರಕೆ ಕೈ ಬೀಸಿ
ದೊರೆತ ಅರೆ ಸತ್ವದೊಳ ಸವಿ ಬಳಸಿದೆ.

ಏನಿದೇನಿದು ಹೋರೆ, ಹೊತ್ತು-ಹೊಳವರಿಯದೆಯೆ
ಹೋರಾಟಕೆದೆ ಉಬ್ಬಿ ಹಗೆ ಮಸದಿದೆ.
ಬಾಳ ಕರವಾಳವದು ಒರೆಯೊಳಗೆ ಮಸ ಕಾಳಿ
ಹೊರಬರುವ ಮುನ್ನದೊಳೆ ಮಸ ಅಡಸಿದೆ.

ನವಿರಿ ಓಡುತ ಬಂದೆ ಈ ತವರ ಗಡಿಯ ಬಳಿ
ವೇದ-ಶಾಲೆಯ ಬೋಧವರಿತ ಮನೆಗೆ.
ಹೂ ಹುಗಿದ ಗೊಬ್ಬರದಿ ಗೆದ್ದಲಿನ ಬೀಡುಗಳು,
ನೆಲ ಕಂಡ ಗೋಪುರದ ಹುಡಿಯ ನೆಲೆಗೆ.

ಗುಡುಗುತಿವೆ ಬ್ರಹ್ಮಾಂಡ, ನಡುಗುತಿವೆ ಜಗಪಿಂಡ,
ಗಂಡುಗೆಟ್ಟಿಹ ಜೋತ ತೋಳ ಕಂಡೆ.
ಸಿರುಕಿಸಿದೆ ಪರಿಕಿಸಿದೆ ಹಳ ಹೊಸತು ಬಲ ಗೆಲುವ,
ನಾಕ-ನರಕದ ಸಮದ ಭೇದವೆಂದೆ.

ಅಂದೊಮ್ಮೆ ವರ ಋಷಿಯು ನೆಲ ತಣಿಸೆ ನೀರ ತೆರ
ಹೀರಕದ ಮಳೆಯನ್ನು ತಾ ಕರೆಯಲು,
ಪೌರುಷವೆ ತಟ ತುಂಬಿ ಕೋಡಿವರಿಯಿತೊ ಎನಲು
ಬೀರ ಹರೆ ಮೊರೆದಿಹುದು ನಭ ಹರಿವೊಲು.

ಎಲೆಲೆ ಆ ಮೊಳಗ ಗುಳಿ ಎನ್ನ ತನು-ಮನದೊಳಗು
ದುಂದುಮಿಸ ತೊಡಗಿತಲ ಡಮರಿನಂತೆ.
ಅವರ ರಣರಣಿತದಲಿ ರಿಂಗಣದ ಕುಣಿತದಲಿ
ಹೃದಯ ಅಂಗಣವಹುದು, ದೊಡ್ಡ ಸಂತೆ!

ತಲೆ ತಾನೆ ಕೆದರುವುದು, ಮೈನಿಮಿರಿ ಮುದುರುವುದು,
ಚಿತ್ತ ಸುತ್ತಲು ಇಣುಕೆ ವಿಕರಾಳವೆ!
ಜೋತ ಜಡಜೀವಿಗಳು ಸೋತ ಅನುಭಾವಿಗಳು
ಮತ್ತೇಸೊ ಕುರಿ ಕುನ್ನಿ ಉರುಳುತಿಹವೆ!

‘ ಮೂವತ್ತು ಮೂರು ಕೋಟಿ ’ ಯೊ ಮಂದಿ ಲೆಕ್ಕಕ್ಕೆ
‘ ಭಾರತಿಯ ಬಸಿರಿನೊಳ ’ ಮಕ್ಕಳಿವರು.
‘ ಹಂಗಿನರಮನೆ ನರಕ ’ ದಲ್ಲಿ ತಂಗಿರೆ ಮರುಕ
ವಿಲ್ಲದೆಯೆ ‘ ತಲೆ ಭಾರ ’ ವೆನಿಸುವವರು.

ತಾಯ ಹಡೆದೊಡಲೇನು ಬಂಜೆಯಾಗಲು ಉಂಟೆ ?
‘ ಬಾಳ್ಮೊದಲೆ ಸಂಜೆ ’ ಯದು ಇಳಿಯಬಹುದೆ ?
ತನ್ನೊಳಿಹ ಬೆಳಕನ್ನೆ ಬೆರಸಿ ಹರಸಿರಲಾಕೆ
ಫಲ ತಾನು ಹುಸಿಯಾಗಿ ತೆರಳಬಹುದೆ ?

ಕ್ರಾಂತಿ ಕ್ರಾಂತಿಯು ಎಂದು ಶಾಂತಿದೂತನು ಕೂಡ
ಭ್ರಾಂತಿಯಾಗುವ ಪರಿಗೆ ಒಬ್ಬೊಳಿಸಿರೆ,
ಕ್ಲಾಂತವಾಯಿತು ಮನಸು ಕೊಲ್ಲಟಿಸೆ ಕೆಂಗನಸು
ಹಾಸ್ಯ-ಭಾಜನಕೆಂದು ಹಗೆ ಮಸಗಿರೆ.

ಏನಿದೇನಿದು ಬದುಕು, ಜೀವಿ ಜೀವಿಯ ನುಂಗಿ
ಕೊಬ್ಬಿ ಕೊರಲನು ತೀಡಿ ತೇಗಲುಂಟು.
ಇದು ತಿಮಿಂಗಲ-ನ್ಯಾಯ, ಮನುಜನಿದನರಸುವುದೆ ?
ಪಶುವು ಇವಗೂ ಮಿಗಿಲು, ಅಂತು ಇಂತು !

ಅಂತರಾತ್ಮನದೇನು ಕಲ್ಲ ಗುಡಿ ವಿಗ್ರಹವೆ ?
ಸ್ನಾನಪೂಜೆಗಳವಗೆ ಸಲ್ಲ ಬರವು.
ಸ್ಥಾಯಿಭಾವಗಳಿಂದ ವಿಭಾವಿಯಾಗಿರಲು
ಕಾವು ಇದ್ದರು ಕೂಡ ಕಲ್ಲ ಕೆರವು.

ಯಾವ ಅಸುವಿನ ಕಸುವೊ, ಬಿಸಿರಕುತಕಿಹ ಹಸಿವೊ,
ಹೊಟ್ಟೆ ಹೊಸೆಯುವ ದೇಶ ಉಳಸೆ ಹುಚ್ಚು.
ಹಗಲಿರುಳು ಹಳವಳವು, ಅದೆ ಗುರಿಯ ಕಳವಳವು,
ಹುರಿಯಾಳು ಕಣಕಿಳಿಯೆ ಬಂತು ಕೆಚ್ಚು.

ಸುಳಿದಿತಲ ಸುಭಗ ದಿನ, ಗಡ! ನಾಡಿನುದ್ಧರಣ,
ಮಾ-ಮುನಿಯ ಮೋಹನನ ಧರ್ಮ ಕದನ.
ವಾಯು ಜಲ ನೆಲವೆಲ್ಲ ಅವನ ಸಂದೇಶವನೆ
ಗುಣಿಗುಣಿಸಿ ಬೀರಿಹುದು, ಸಾಗೆ ಪಯಣ.

‘ಆಗು ಆಗೆಲೆ ಸಿದ್ಧ, ಬುದ್ಧನಂತೆಯೆ ಆಗು,
ಚಾಗ-ಕೊತ್ತಲಕೇರು ಹತ್ತಿ ಲಗ್ಗೆ.
ನೀ ಸುರಿದ ಬೆವರ ಹನಿ ಜೆಲೆ ಮಿಕ್ಕ ಮುತ್ತುಮಣಿ
ಸೌಭಾಗ್ಯ-ಸರ ತಾಯ್ಗೆ, ನೀನು ಓಗ್ಗೆ.’

ಅವನ ನುಡಿ ಜಾಡೊಂದು ಏಳು ಸುಳವಿನ ಅರಳು,
ಚಾರ್ವಾಕ ದನಿಯಲ್ಲ, ಚೊಕ್ಕ ಹೊನ್ನು.
ಅದರ ಪರಿಘದಿ ಬೆಳಕು ಗುಡಿಗಟ್ಟೆ ಸಿಂದಿಸಲು
ಮನದ ಕತ್ತಲೆಗದುವೆ ಅರುಣನೆನ್ನು.

ತವಸಿಯಾಶೀರ್ವಚನ ಸಜ್ಜನವ ಶುಭಕಥನ
ಆದರಿಸಿದಾ ಇರವು ಪುಣ್ಯಾಹೀನ.
ಇಂತರಿದು ಓಗೊಡಲು, ಆ ಅಹಿಂಸಾಯೋಧ
ತೋರಿಹನು ಹೊಸ ಬೆಳಕ, ದಿಟದ ತಾಣ.

‘ ಅಸ್ತು ಅಸ್ತೆಲೆ ತಂದೆ, ನಿನ್ನ ದಾರಿಗೆ ಬಂದೆ
ಹೊತ್ತೆ ನಿರ್ಮಲಕರುಣೆ ’ ಎಂದು ನುಡಿದೆ.
ಹುಡಿಕೂತ ನಾಡ ಗುಡಿ-ಮಣ್ಣ ಮಸ್ತಕಕೊತ್ತಿ
ನೆನೆನೆನೆದು ನೆಲ-ತಾಯ, ಮುಂದೆ ನಡೆದೆ.

ಕಣ್ಣಪರೆ ಹರಿದಿಹುದು ಮಂಜೆಲ್ಲ ಸರಿದಿಹುದು
ಸರಿಯ ಲಗ್ನದ ನಂಟ ಹಸಿ ಇಳಿದಿದೆ.
ಬಣ್ಣಬಣ್ಣದ ಸುಮನ ಸುರಿದುವೋ ಮುಗಿಲಿಂದ,
ಸಂದಿತಲ ಶುಭ ಶಕುನ ಎಂದು ನೆನೆದೆ.

ದಾಟಿದೆನು ಅಗಸೆಯನು ಹೊಸಹಳ್ಳಿ ಹಳ್ಳವನು
ತವರುಮನೆಯಂಗಣಕೆ ಕೈಮುಗಿದೆನು.
ಗಡಿಯ ಶಿವಗುಡಿ-ಗಂಟೆ ದೇವದತ್ತವ ಧ್ವನಿಸೆ
ನರನ ಹುರಿತನ ನೆಲಸಿತಿಲ್ಲಿ ತಾನು !

ಕೇಕೆ ಹಾಕಿತು ನಗರ ನಡೆದಿರಲು ಕಡು ಬಸರ,
‘ ವಂದೆ ಮಾತರ ’ ಮೆಂದು ನಮಿಸುವಾಗ
ಬಾಲ-ಚುಕ್ಕೆಗಳೆನಿತೊ ಗಮ್ಮನೆರಗುವ ಪರಿಗೆ
ಬೆರಗುವಡೆಸಿತು ದಂಡು ಬಂದು ಬೇಗ.

ಸಿಡಿಗುಂಡಿಗಂಜಬಹ ಕಾಡ ಮೊಲದೊಲು ಬಾಳೆ ?
ಬೆಚ್ಚಿಸುವ ಬಡಿಗೆಗಳ ತತ್ವ ಸಾಕು.
ಕಾಯ ಕೈಯಾಳಾಗೆ ಮನವು ಸೆರೆ ಸೇರುವುದೆ ?
ಬೇಡಿ-ಕಡಗದ ಭೀತಿ ಆಚೆ ನೂಕು.

ಆಯ್ತು ಸತ್ಯಾಗ್ರಹದ ಸಮರ, ವಿಜಯದ ಗಳಿಕೆ
ಸೆರೆಮನೆಯ ಸ್ವಾಗತವು ದಿನದಿ ಎಲ್ಲ.
ಅಂದು ಮಧ್ಯಾಷ್ಟಮಿಯ ರಾತ್ರಿ ನಸು ನಿದ್ದೆ ಬರೆ
ಅಷ್ಟಕ್ಕೆ ಮಂಗಳವೆ? ಇಲ್ಲ ಇಲ್ಲ!

*   *
*

## ಎರಡನೆಯ ಅಷ್ಟಕ



“ದಯೆಯೆ ಅಸು-ಉಸಿರಾಗಿ ಎಲರ ಹರಹುವ ಗೆಳೆಯ
ಒಳಗ ಬನದಲಿ ಬೆಳೆದ ತರುಲತೆಯರ,
ಏಕೆ ಜೋಲುವಿರಣ್ಣಾ, ಜೀವ ಆದೊಲು ಸಣ್ಣ?
ಏನು ಗೀತಾವಹಕೆ ಬಳುಕುತಿಹಿರ?

ಇರುಳ ಮೂರನೆ ಜಾವ ತೆರಳಿತೆನೆ ಅದೊ ಕೇಳಿ,
ಖಗಕುಲವು ಕಲರವವ ಕೂಜನಿಸಿದೆ.
ಎಂಥ ನಿದ್ದೆಯ ಮಬ್ಬು, ನಿಮಿರೆ ನಿಂದಿವೆ ಹುಬ್ಬು!
ಬಲ್ಲೆ ಶ್ರಮ, ಅದು ತಾನೆ ತೂಕಡಿಸಿದೆ.

ಇರಲಿರಲಿ ತುಸ ತೆರವು, ಎರಡು ಗಳಿಗೆಯ ನೆರವು.
ಮರಳಿ ಬರುವುದೆ ಮತ್ತೆ ಅಳಿದ ಒಲವು?
ಸಲುವ ಸಮಯದ ಮುನ್ನ ಮುಗಿಯಲಿರೆ ಕಥೆ-ಬಣ್ಣ,
ಅಷ್ಟು ಎಚ್ಚರ ಸಾಕು—ಎಷ್ಟೊ ಗೆಲವು!

ಸೆರೆಮನೆಯ ನೀರಸಕೆ ಸಂಗೀತ ಬೆರಸುವುದೆ ?
ಜಿನಸು-ತಿನಸಿಗೆ ಛಂದ ಬಂಧವೇಕೆ ?
ನಿಮ್ಮ ದಿನ ಬದುಕೆಲ್ಲ ಆದರದೇ ವಿವಂವಿರೆ
ಜೇರೆ ಅರ್ಥದ ಮಾತು ವ್ಯರ್ಥ ಟೀಕೆ.

ನಾಡ ನಡುಮನೆ ಹೆರರ ಆತಳತೆ-ಗೋಡೆಯಲಿ
ಸರಿ ಸಾಲೆ ಬೀಡ ಸಮ–ಜೇರೆಯೇನು ?
ಪಂಜರದ ಶುಕ ನುಡಿವ ವೇದ ಗೀತವು ಸೊಗಸೆ ?
ಕಸರತ್ತು-ಮನೆ ಸಿಂಗ ಜೀರನೇನು ?

ದೇಶದಳಲಿನ ರಾಸಿ ಸಹ್ಯಗಿರಿಶಿಖರ-ಸರಿ
ಯೆತ್ತರಕೆ ಏರಿರಲು ಅದರಲೊಂದು
ಸಾವಿರಾಂಶಕೆ ಕೂಡ ಎಟಕದೀ ದುಃಖವದು
ಲೆಕ್ಕಕ್ಕೆ ಕೂಡುವದೆ ನಡುವೆ ಬಂದು ?

ನ್ಯಾಯವೆಂದರದೇನು ಗಾಳಿ ಪಟ ಸೂತ್ರನೆಯೆ ?
ಕಟ್ಟಳೆಯ ಹೊತ್ತ್ರಗೆಗೆ ಅರ್ಥವಿಹುದೆ ?
ನುಡಿಗೊಂದು ಜಡ ಶಿಕ್ಷೆ ದಂಡ ಕಾದಿರೆ ಕುಳಿತು
ಶಾಸನವೆ ನ್ಯಾಯ-ದೊರೆಯಡಿ ಕೆಳಗಿದೆ.

ನಮ್ಮ ವಲಯದಿ ನಮಗೆ ನಡೆನುಡಿಗೆ ಕಡುಸಿಲುಬೆ,
ಅಬ್ಬಬ್ಬ ವೇತಾಳ ರಾಜ್ಯವಲ್ಲ !
ಮಬ್ಬಹುದು ಮನವೆಲ್ಲ, ಕುರಿ ಮಂದೆ ಮೊಗವಾಡ
ತೊಟ್ಟು ತಲೆ ಕೆಳಗಾಗಿ ತಂಗಲಲ್ಲ !

ಅಂದಹುದು ಮೊದಲ ದಿನ, ಜಯ ಪರಾಕಿನ ಗಡಣ
ಎದೆಯ ವಾದನದೊಡನೆ ಎದುರುಗೊಳಲು
ಬಗೆಯಾರು ಹೊಸ ಮುಖದಿ ನಗೆ-ನವಿಲು ಕುಣಿದಿಹುದು,
ನಲವೆ ಸುಗ್ಗಿಯ ಹೂಲಿ–ಸೆರೆಮನೆಯೊಳು.

‘ ಏನು ಕಾರಣವಣ್ಣ ಸೋದರನ ಆಗಮನ,
ಬಾಲ ಬಡಿಯುವ ಆಳ ಬಳ್ಳ ಬಾಳೆ ? ’
ಎಂಬ ಕ್ಷೇಮಾಲಾಪ ಕೇಳಿ ಕೆಣಕಲು ಕುನಷು
ಅಧಿಕಾರಿ ಕಡೆಯುವನು ಬೈಗಳ ಮಳೆ.

ಕಲ್ಲು ಮಣ್ಣನು ಹೊರಲು ಎಲುಬು ಕಲ್ಲಾಗುವುದು,
ಇರವಿನರಿವಿದ್ದವಗೆ ಎದೆಯು ಕಲ್ಲೆ ?
ರಸಿಕ ಜನ ಜೊತೆ ದುಡಿಯೆ ರಸಕಸಿಯು ರಸಕಥೆಯೆ !
ಮಾತಿನಲಿ ಶ್ರಮ ಕರಗಿ ಬೆಮರ ಚಲ್ಲೆ.

ಗೆಳೆತನದ ಹದುಳದೊಳು ಸಾವಿರದ ಸಂವಾದ,
ಬಿಜ್ಜೆ ಹೆಜ್ಜೆಯ ಹಾಕಿ ನರ್ತಿಸುವುದು.
ಜ್ಞಾನ ಸಮ್ಮೇಲನವು ನೆರೆದು ಕೋಣೆಗೆ ಕೂಡ
ಜಾಣ ಬದುಕಿನ ಹದವ ಬಿತ್ತರಿಪುದು.

ಕೆಳೆಯ ಕಳೆದಿಹ ಬಾಳು ಹಾಳುಮನೆ-ಹುಡಿಬೀಡು,
ಹಗಲೆ ಕನ್ನವ ಕೊರೆಯೆ ಕೇಳಲಾರು ?
ಹೃದಯಯಾತನೆಯುರಿಯ ಆಡಿ ಆರಿಸಬಹುದು.;
ಇಲ್ಲದಿರೆ ಜಲಲಿಪಿಯು ಅಳಲ ದೂರು.

ಶ್ರೇಯಕ್ಕೆ ನಡುಕಟ್ಟಿ ಸ್ನೇಹವನು ಬದಿಗೊತ್ತಿ
ಹೆಸರ ಹೋಳಿಗೆ ಸವಿವ ಬಂಟತನಕೆ
ಇದೊ ಸಾಕು ಶರಣು ಬಿಡು, ಸುಡು ಬಾಳ್ಕೆ ಸಲ್ಲದದು,
ಸಂಕಟದಿ ಕರಕೊಳದ ನಂಟನೇಕೆ ?

ಸಮದೃಷ್ಟಿ ಸೃಷ್ಟಿ ತಾ ಇಲ್ಲಿ ಮೇಣವತರಿಸೆ
ಒಳುಗುಣದ ಸೊದೆ-ಮೋಡ ಸೋನೆ ಮಳೆಯ
ಕರೆಯೆ ಸುರಿನೀರುಂಡು ಬೆಳೆದ ಎದೆ-ಹೊಲ ಕಂಡು
ಹರಸಿಹನು ಹೃದಯೇಶ ಚಿರವು ಕೆಳೆಯ.

ಬಲ್ಲಿದರ ಜಾಣ್ ನೆಲೆಗೆ ಜನವಿರದ ಹಳವು ಬೆಲೆ
ಅನುಭವದ ಅಳವಿನಲಿ ಬಾರದಿರಲು.
ಓದು-ಅನುಭವದೆರಕ ಅರಗು ಹೊನ್ನಿನ ದಂಡೆ,
ಅದ ಮುಡಿಯೆ ಸೊಬಗಹುದು ಬಾಳ ಹೆಳಲು.

ಇಂತು ಹಲ ಚೆಲುವು ನುಡಿ ಮಿಂಚು ಬೆಳಕಿನ ಪ್ರಣತಿ
ಎಲ್ಲರೆದೆಗುಡಿಯೊಳಗೆ ದೀಪ ಚೆಲ್ಲೆ
ಮನಸು ಮಾಯೆಯ ಯಂತ್ರ ಅಳಿಯಂಚೆ ತಂತ್ರವನು,
ಒರ್ವನಾತ್ಮದ ಗೀತ ಸರ್ವರಲ್ಲೆ !

ಸಿರಿಯ ಮರೆಯೊಳು ಸರಸಿ ವಚನವಿದ್ಯಾವರದೆ
ಸರಸದಲಿ ಹರಿಯುತಿರೆ ಸುರನದಿಯೊಲು
ರಸಗಂಗೆ ಈಂಟಿದೆನು, ಹಲ ಬೊಗಸೆ ಹಣಿಸಿದೆನು,
ಬಸವ ಅಲ್ಲಮ ಅಕ್ಕರಿತ್ತ ಹಾಲು.

‘ ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ ’
‘ ಅಂತರಂಗದ ಶುದ್ಧಿ ’ ಇದುವೆ ನೋಡ.
‘ ಕೊಲುವವನು ಮಾದಿಗನು ಹೊಲಸು ತಿಂಬುವ ಹೊಲೆಯ ’
ಕರ್ಮ ಬೆನ್ನಿಗೆ ಬಂದ ಧರ್ಮಗೂಢ.

‘ ಮಿಣುಕು ಬತ್ತಿಯ ಸುತ್ತ ಸುಳಿವಂಥ ಹೊನ್ನೆಹುಳ ’
ದಂತೆ ಜೀವನವೆಂದು ಅಕ್ಕನವರು
ಮಾತು ಮನವೊಂದೆನಿಸೆ ಮಲ್ಲಿಕಾರ್ಜುನನೊಲಿಸೆ
ರಾಣಿ ಪಟ್ಟವ ತಳ್ಳಿ ತೆರಳುತಿಹರು.

ಅಲ್ಲಮರ ಋಷಿವಾಣಿ ಗಾಳಿ-ತೇಜಿಯನೇರಿ
ಪ್ರಭುವಾಕ್ಯ ಪಲ್ಲವಿಸಿ ಪಸರುವಾಗೆ
‘ ಮಾತೆ ಜ್ಯೋತಿರ್ಲಿಂಗ ’ ಜ್ಯೋತಿ-ಜೋಗುಳ ಗೀತ
ಶೂನ್ಯ ಸಿಂಹಾಸನದ ಸೀಮೆಯೊಳಗೆ.

ಸ್ವಾವಲಂಬನ ಹೋರೆ ಸ್ವರ್ಗಜೀವನಕೆಣೆಯು,
ಬೇರೆ ಏಣಿಯನಲ್ಲಿ ಇರಿಸಲೇಕೆ ?
ಓರ್ವ ಮಜ್ಜಿಗೆ ಸುರಿಯೆ ಮತ್ತೋರ್ವ ಹುಲುಮೀಸೆ
ಎತ್ತುತಿರೆ ನಗೆಬರದೆ ಮರುಳುತನಕೆ ?

ಸೌಜನ್ಯ ತನಿಮಾತು ಸಮಯ-ಸಂಜೀವಿನಿಯು,
ಸುಡುಬನಕೆ ಜಡಿಮಳೆಯೆ, ಎನ್ನಬಹುದು.
ಎಗ್ಗೆ ಇಲ್ಲದೆ ನಡೆವನೆದುರಾಗಿ ಇಳಿ ಮೋರೆ
ತಳೆದಿರಲು ಅದೆ ಜೀವ ತಿನ್ನುತಿಹುದು.

ಮತ್ತೀಸೊ ಜಾಣುನುಡಿಸೂಡು ಮಂಚಿಕೆ ಇಡಲು
ಜೇಸಿಗೆಯ ಬೆಳೆ ಕಾಯೆ ಹೊಲ ನೆಳಲದು.
ಇವನರಿತು ನಾ ಕಳೆದ ಬದುಕು ಪುಷ್ಯದ ಹಗಲು,
ಬಿಸಿಲು ಬೆನ್ನಿಗೆ ಬರೆಯ ಕೊಡಲರಿಯದು.

ವರುಷ ಸರಿವುದು ಒಂದು, ಹರುಷ ನಿಮಿಷಕೆ ಸಂದು,
ಪರುಷಕ್ಕೆ ತೆರವಿರದ ಗೆಳೆತನದಲಿ.
ಒಬ್ಬೊರೊಬ್ಬರ ಕಣ್ಣು ಹಣ್ಣುವೊಗ-ರಸವೆನ್ನು,
ಸವಿಯು ತಾ ತೇಲುವುದು ತುಟಿ ಬಳಿಯಲಿ.

ಬರಲುಂಟು ನಡುನಡುವೆ ತವದೂರ ಮನೆಮಂದಿ
ಕಳುಹಿಸಿದ ಸುಖದುಃಖದೋಲೆ-ಕಟ್ಟು
ಪ್ರೀತಿ ಜೀವದ ರಕುತ ಲಿಪಿರೂಪ ಸಿರವಿಸಿರೆ
ಒಲಪಿಸೊಕ್ಕಣೆ ಅಲ್ಲಿ ಮುತ್ತನಿಟ್ಟು.

ಅವನು ಎದೆ ಬಳಿ ಇಟ್ಟು ಹುಮ್ಮಸಕೆ ಗತಿಗೊಟ್ಟು
ಹೆಜ್ಜೆ ಹಾಕುವ ಹಲರ ಹುಸಿಗುಣಿತಕೆ.
ಎನ್ನ ಹೃದ್ರಂಗವದು ಮಾರ್ದನಿಯ ಕೊಡುತಿಹುದು
ಉತ್ತರೋತ್ತರವಿರದ ತತ್ತರಿತಕೆ.

ಅಲ್ಲಿ ಕಾರಾಗ್ರಹದ ಆಚೆ ಕೂಗಳತೆಯಲಿ
ಮೊರೆಯುತಿದೆ ಝುರಿಯೊಂದು ತುಂಬಿ ಸೆಳವು,
ಇಲ್ಲಿ ಸೆರೆವಾಸದಲಿ ಹಲರ ನರಳಿಕೆ ಅಳುವು
ಸ್ಮರಣೆ ತರುವವು ಆದರ ದನಿಯ ಹೊಳವು.

ನಾನೇಸೊ ಒಳ ಗೀತ ತಾನ ಪಾರಾಯಣವ
ಹರಿವು ಕಡೆದ ಸತಾರ ನಾದದೊಳಗೆ
ರಾಗದಾಲಾಪನವ ನಡೆಸಿ ನುಡಿಸುವೆ ಮನದ
ವೇದನೆಯ ತುಸ ತೊಳೆಯೆ ಜೆಳ್ಳಬೆಳಗೆ

ಹೊಸಹಳ್ಳಿ ಹಳೆ ನೆನಕೆ ಕೆಲೆಯುವವು ಕೆಲ ವೇಳೆ,
ಜೊಂಪ ಹೊಂದಿಹ ಹುಡುಗ ಜಾಲಿಮರದ
ಅಡಿಯಲ್ಲಿ ತೂಕಡಿಸಿ ಎರೆ ಕಾಯೆ ಕೂಗುವೊಲು
ಆಗಿಹುದು ಆ ಬದುಕು ಅರ್ಥ ಮುಗುದ.

ಯಾವ ಮಾಯೆಯ ಮುಸಿಸೊ ಹೆಡೆದೆರೆದ ಉರಗನೊಲು
ಇಲ್ಲು ತಲೆಯಾಡಿಸುತ ನಲಿನಲಿದಿದೆ.
ಹಣೆಯ ರತ್ನವ ನೋಡಿ ನಿಡುದೋಳ ಚಾಚುವುದೆ?
ನಾಗಮೋಡಿಯ ವಿಷವ ವಿಧಿ ಕರೆದಿದೆ.

ಎಳೆಹಗಲ ಹುಸಿಜೋಮು ಕನಸೊಂದ ಕಂಡಿಹುದು:
ಸುತ್ತ ಕತ್ತಲ ಸಂತೆ, ಕಾಳಗಡಲು.
ಚಿಕ್ಕೆ ಚಂದ್ರಮರೆಲ್ಲ ಎತ್ತೊ ಓಡಿಹರಣ್ಣ
ಧೂಮಕೇತುವೆ ಮುಂದೆ ನಿಂದ ಹೊಳಲು.

ದಳ ಕಳಚಿ ಹಳಚಿದುವ ಹಳವಂಡ ಹೂವೊಂದು
ದುರ್ಭಾಸದಲೆ ತೆರೆಯ ಸುಳಿಯೊಡೆಯಿಸೆ
ನಾಸಿಕವು ಮೋಹಿಸಿದೆ ಹಸಿದ ಪ್ರಣಯಿಯ ಪರಿಯೆ,
ಚಿತ್ತ ಬೆಚ್ಚುತಲಿಹುದು ಎವೆ ತೆರೆಯಿಸೆ.

ಅಂಮು ಮುಸುಗಿದ ನಿದ್ದೆ ಮಧು ಕುಡಿದ ಮಸ್ತಾನೆ,
ಕಲಕು ಕಾಸಾರದಲಿ ಕೆಸರುಣುತಿದೆ.
ಪಡಕಾನೆ ಹಬ್ಬಕ್ಕೆ ಮೈಜೋತು ಬಾತಂತೆ
ಮೂಲೆ-ಕಸಹಾಸಿನಲಿ ಉರುಳುರುಳಿದೆ. ೧೧೨೨

ದುಃಸ್ವಪ್ನ ದುಮ್ಮಾನ ಗುಳಿಗಟ್ಟಿ ಇಳಿದುವೊಲು
ಧಕ್ಕ ಧಕ ಧೈಯಂದು ಎದೆ ಬಿರುವುದು.
ಅಷ್ಟಮದ ಸ್ಥಾನದಲಿ ಶನಿರಾಯ ತಂಗಿರಲು
ಪಂಚಾಂಗ ಗ್ರಹಶಾಂತಿಗಾಗಬಾರದು.

ಬೆಳಗಿನೆಂಟರ ಗಂಟೆ ಜವನ ಕೋಣನ ಕೊರಳ
ಗಿಲುಗೆಜ್ಜೆ ಭಯವಾಂತು ಬಾಜಿಸುವೊಲು
ತಡವಡಿಸೆ ಎಡವಿತಲ ಮೈಗತ್ತು ಮನಗತ್ತು
ಮುಚ್ಚಿದೆವೆ ಪರೆ ಹರಿದು ಕಣ್ ತೆರೆಯಲು.

ಹಣಿಕುವುದೆ ತಡ ಹೊರಗೆ, ಸಿದ್ಧನಿಹ ಪಡೆಯಾಳು
ಭೂತಭೀಕರನಂತೆ ಬಾಗಿಲಿನಲಿ. ೧೧.೦
ಉರಿಯ ಗಾಳಿಯ ಉಸಿರಿ ಓಲೆಯೊಂದೆಸೆದಿಹನು
ವಿಕಟಮುದ್ರಾಕೃತಿಯ ಮೋಹರಿನಲಿ.

ಆ ಲಲಾಟದ ಬರೆಹ ಇಂದೇನೊ ಹೊಸ ತರಹೆ,
ಬೇರಾವ ಶಾಸನವೊ ಸಡಗರಿಸಿದೆ
ಎಂದೆನುತ ಸೂತಕದ ನಾಣ್ಯ ನುಂಗಲು ಹೊರಟ
ತಿರುಕನೊಲು ಕೈಚಾಚಿ ಮುಂದಿರಿಸಿದೆ.

ಆಮವು ಹುತ್ತದಿ ಹಸ್ತ ಹೊಗಿಸಿದೊಲು ಆಯಿತಹ !
ತಸಿನಂಜು ತನು ತುಂಬ ಆವರಿಸಿದೆ.
ನಾಲಗೆಯು ಉಳುಕುಹಿದು ಉಗ್ಗಿಹುದು ಉಡುಗಿಹುದು,
ತಾಯ ಸಾವಿನ ಸುದ್ದಿ ನುಡಿ ಬಳಸಿದೆ.

ತಿರೆಯೊಡಲ ತೆರವಿನಲಿ ಕುದಿವ ರಾಸಾಯನವು
ಹೊತ್ತ ಕವಚವ ತೊಡೆವ ಕಾವೆ ಇಲ್ಲಿ
ನೆತ್ತರಿನ ಒತ್ತಡಕೆ ಒತ್ತೆಯಾಯಿತೊ ಏನೊ,
ನಖಶಿಖಾಂತದ ನಡುಗು ನವಿರ ಚೆಲ್ಲಿ.

ಸಂದಿತಲ ಭೂಕಂಪ ಹೃದಯದುಬ್ಬರಣೆಯಲಿ,
ಬಂತು ಝುಂಝಾವಾತ ನಿಯಮ ಹೊರತು.
ಗಾಳಿರಾಟಾಳದಲಿ ಕುಳಿತ ಕೂಸಿನ ಪಂಗೆ
ಕಣ್ಣು ಕಕ್ಕಾವಿಕ್ಕಿ, ರಾವು ಬೆರೆತು.

ಅರೆ ನಿಮಿಷ ಸರಿದಿಲ್ಲ, ಬೆಮರಿ ಸಾಗರವಾಗೆ
ತಳವಿರದ ಪಾತಾಲ-ಗಡಿ ಹುಡುಕಲು
ಸಾರಿ ಅರಿವಾರಿಹುದು, ತನು ನೆಲಕೆ ಜಾರಿಹುದು
ಆಯಾಸ ಹಾಸುಗೆಯ ಪವಡಿಸಿರಲು.

ಎಂಥ ಜೀವನ ಸಮರ ಚೇತನಾಹೀನರಲಿ ?
ಗವಿ ಬಿದ್ದ ಕರು ಮರಳೆ ದಾರಿ ಎಲ್ಲಿ ?
ಎಂದು ಯೋಚನೆ ಸುಳಿಯೆ ಒಡನೊಡನೆ ಸುಳಿದಿಹನು
ಹಾದಿ ತೋರುವ ಗೆಳೆಯ ಕರುಣೆ ಚೆಲ್ಲಿ.

ಸಖಜೀವಿ ಸಿಂಚಿಸಿದ ಕನಿಕರದ ಅಮೃತವನು
ವೈವಡವಿ ದಯೆ ಪೂಸಿ ಬೋಳವಿಸುತ,
ಶ್ಯಾಮಲೆಯ ಬೆರಳೊಲವೆ ಅಶ್ರು ಒರೆಸಿತು ಎನಿಸೆ
ಮಮತೆ-ಹಿಡಿಗೋಲೆನಗೆ ಆನುಗೊಡುತ.

ಅರೆರೆ ಹೃದಯ-ದ್ರವ್ಯ ದ್ರವಿಸಿ ಧಾರೆಯ ತಾಳಿ
ಉಕ್ಕಿ ಕಣ್ಣಿನ ಬುಗ್ಗೆ ದಾಟಿ ತಾನು
ಗಲ್ಲ ತೋಯಿಸೆ ಗುಳ್ಳೆ ಮೊಳೆತಿಹವು ಕಾವಿನಲಿ,
ಇಂಥ ಯಾತನೆ ವಿವರ ಹೇಳಲೇನು.

ಹಂಬಲದ ಹಲ ವೃತ್ತ ಸಂಧಿಸಲು ಒಳಬಗೆಯ
ನಡುಕ ತುಟಿ ಹಿಡಿದಂತೆ ಬಾಯ ಬಿಡದೆ
ಸಖಗೋಲೆ ಸಲಿಸಿಹೆನು, ಮರಳಿ ತೆರೆ-ಜೊಗಸೆಯನು
ಮುಖಕೆ ಮೇಲುದ ಮಾಡಿ ಸುಮ್ಮನುಳಿದೆ.

ಮತ್ತೆರಡು ಗತ ಜೀವ ಗತಿಗೊಂಡು ಬಂದಿಹವು
ಗುಪ್ತಗಾಮಿಯ ತೆರದಿ ಚಿತ್ತದೊಳಗೆ.
ತಾಯ ಮೊಗ ತೊಡವಿನಲಿ ತಂದೆ ದನಿಗೊಡುತಿಹರು !
ಚಿಂತೆ ತೊಡಕಿತು ಮೀನ ಗಾಳದೆಳೆಗೆ.

ಹಡೆದು ಹಲುಬಿದ ಜನವ ಕಾಪಿಡದ ಹುಲುಬಾಳು
ನಾಡಮಾತೆಯ ಬೇಡಿ ಬಿಡಿಸಬಹುದೆ ?
ಮನೆಯಾಳದಾ ಬಲುಹು ಮಾರನಾಳುವುದುಂಟೆ ?
ಇಲಿಯ ಹುಲಿ-ವೇಷವದು—ಹಮ್ಮು ಬರಿದೆ !

ಬಗೆಗದಡಿತೀ ಒಗಟಿ: ಉಳಿದವರ ಗಳಿಸುವೆನೆ?
ಸೋದರಿಯ ಆನನವ ಕಾಣಲೆಂತು?
ಶಾಪತಾಪದಿ ದಗ್ಧ ಸವ್ಯಸಾಚಿಯು ಪಾಡು,
ಎದೆ ಸುಟ್ಟ ಏಕಾಕಿ ಬದುಕದಂತು.

ಆಕಟಕಟ ಗುಟ್ಟಿನಲಿ ರಕ್ತ ತೈಲವ ಹೀರಿ
ಹೋಮುದುರಿ ಏರುತಿರೆ ಒರೆಯೆ ವರದಿ.
ಹಿಮಗಟ್ಟಿ ನಿಂತೆದೆಯು ಕರಗಿ ತವಿಸಲು ಬರದು,
ತ್ರಾಹಿ ತ್ರಾಹೀ ಎನಲು ಸಂದ ಸರದಿ.

ಬರ ಸಿಡಿಲ ಹೊಡೆತಕ್ಕೆ ಉರುಳುತಿರೆ ಆಲ ಮರ
ನೆಲಕಿಳಿದ ತೊಂಗೆ-ಬಲ ಎಷ್ಟೊ ಸೊನ್ನೆ.
ಇಂತಹುದು ಅವನು ಆ ಅನುಭವದ ನೇಹಿಗನು
ಮರಳಿ ಬಳಿ ಬಂದಿರಲು 'ಅಯ್ಯೋ' ಎನ್ನೆ.

ಎನ್ನ ಗೋಳಿನ ಪದಕೆ ಅವನ ಬಾಳಿನ ವೀಣೆ
ಒನ್ನೆಲದ ಶ್ರುತಿ ಹಿಡಿದು ದನಿಗೊಡುತಿರೆ
ವಾಣಿ-ಪ್ರಾವೀಣ್ಯದೊಳ ಲೀಲೆ ಪಡೆನುಡಿ-ಮಾಲೆ
ಮಾಯೆ ಸೃಜಿಸಿದೆ ಮನಸು ಕವಲೊಡೆದಿರೆ.

ಕ್ಷಮೆಯ ಯಾಚನೆಗೆಂದು ಯೋಚನೆಯ ನಡೆಸಿರಲು
ಯಾವ ಸೂಚನೆ ಸಲಹೆ ಬುದ್ಧಿ ತಾಗಿ
ತೂಕ ಸಂಬರದಿರಲು ಯುಕ್ತಿ ವಾದವ ಹೂಡಿ
ಯೋಜಿಸಿಹ ದಿಟಹಾದಿ ಚತುರ್ಯೋಗಿ.

‘ ಎಂಥ ಮನಸಿನ ಕಲುಷ, ದುರ್ಬಲದ ಚಿತ್ರವಲ !
ಗಂಡುಗೆಟ್ಟಿಹ ಪುರುಷ ಗಳುಪುತಿಹನು.
ಅರಮನೆಯ ವನಿತೆಯರ ಮಧ್ಯೆ ಮಾತಿನ ಧೀರ
ಉತ್ತರನ ಅವತಾರ ಬೇರೆಯೇನು ?

ದಯೆಯು ಕ್ಷಮೆ-ಗುಣವೆರಡು ಗೌರವಕೆ ತೋಳಬಲ,
ಸಾಯುವಗೆ ನವಜೀವ ತುಂಬಬಹುದು.
ಆದರವೆ ಬೀಜಗಳು ತತಿಯಿರದೆ ಮುಗಳಿಡಲು
ಜೋಳ ಬೆಳೆ ಜೊಳ್ಳಾಗಿ ದಂಟಿ ಇಹುದು. ’

ಬೆಚ್ಚಿದೆನು ಬೆದಕಿದೆನು ಒಳಗೊಳಗೆ ಮಿಡುಕಿದೆನು
ಕದಿಯುತಿಹ ಹೊಚ್ಚ ಹೊಸ ತುಡುಗನಂತೆ.
‘ ಕಳವಿನಲಿ ಕೊಬ್ಬರಿಯ ಕಣ್ ಮುಚ್ಚಿ ತಿಂದರೆಯು
ಕಸುವು ಬಾರದೆ ಉಂಟೆ ? ’—ಹೇಳಲಿಂತೆ

ಅವನ ಮಾತಿನ ಬಾಣದೊಣೆಯು ಕೆಡೆದುದು ಎನ್ನ
ಎದೆಗೆ ಮುತ್ತಿಗೆಯಿಟ್ಟ ಕರಿಯ ಇರುಳ.
ಎದುರು ಯಾವನೊ ಭಾಸು ಮನದ ಕ್ಷಿತಿಜದ ಮೇಗೆ
ಹೆದೆ ಕೀಡಿ ಹೊಡೆದಿಹನು ಬೆಳಕ ಸರಳ.

‘ ಕೊಡದಿರಲಿ ನರವೀರ ರಣಕಣದಿ ಕರುಣೆಗೆಡೆ ’
‘ ಯುದ್ಧಾಯ ಯುಜ್ಯಸ್ವ ’—ದೇವ ಮಂತ್ರ !
ಗೀತೆ ತಿಳಿವನು ಅರುಹೆ ಮರಳಿ ಹುರುಪಿನ ಹರೆಯ,
ಅವನ ಅಂಶದ ಬೊಂಬೆ ಅಸ್ವತಂತ್ರ !

## ಸೆರೆಯಾಳು

ಹಿಂಬಳಸಿ ನಡೆದಿಹೆನು ಶೂನ್ಯವಹ ನೆಳಲೊಂದ,
ಅದುವೆ ನೇತಾರನೊಲು ಅಧಿಕರಿಸಿದೆ.
ತುಂಬು-ಶಶಿಮಂಡಲದಿ ಜಿಂಕೆ ಸ್ವಾರಿಯ ಛಾಯೆ,
ತಿಂಗಳಿನ ತೇರಾಳು ಬೇರೆ ಇಹುದೆ ?

ಎಂತೇನೊ ಸಾಗಿಹುದು ಹೊತ್ತು ಭೂಮಿಯ ಗೋಲ
ಕಪ್ಪಲಿಯ ಇಳಿನೆಲದಿ ಉರುಳಿದಂತೆ.
‘ ತೂತಿರುವ ಕೊಡ ನೀರ ತರಲು ಬಾರದು, ದಿಟವು ’
ಮತ್ತೆ ಚಿತ್ತವು ಅಳಲು ನೆನೆದೆನಿಂತೆ.

ಸೆರೆಮನೆಯ ಸಡಗರವು ಶವಕೆ ಆಸರೆ-ನೆಳಲು,
ಇಂತಿರುವ ಘನ ಗೋರಿ, ಗೋಳಗುಮುಟ.
ನೋವು ಗುಣಿತಕೆ ಸಂದು ಮಿಡಿಯುತಿರೆ ಬಹುಗೀತ
ಜಗದ ವಿಸ್ಮಯಕೊಂದು ಅಮರಮುಕುಟ.

ಇಲ್ಲಿ ಚರಿಸುವ ಹರಣ ನೆನೆದು ಜೀವನ-ಮರಣ
ಮಧ್ಯದಲಿ ಕುಂಟುತಿರೆ ಸುಖದ ಬಾಳೆ ?
ಆವಾರದಾಚೆಗಿನ ಗಾಳಿ ಅರೆಮರೆವಿನಲಿ
ತರದು ವಾರ್ತಾವೀಚಿ—ಇರವು ಹಾಳೆ !

ಒಮ್ಮೊಮ್ಮೆ ನಡುರಾತ್ರಿ ‘ ಕುಹು ’ರವವು ಕೇಣಕಿ ಬರೆ
ಅದು ಪ್ರೇತ ಸಂಗೀತ, ಇಂತಹುದಲೆ.
ಅದ ಕೇಳಿ ಮರವಟ್ಟ ಕಿವಿಯು ರಸ ಗ್ರಹಿಸುವುದೆ ?
ಅಕ್ಕಸದ ಸೊಲ್ಲು ಸಹ ಇಂಚರವಲೆ.

ಮತ್ತೆ ಕಡೆದಿದೆ ಮನಸು ಸ್ವಪ್ನಲೋಕದ ಕಥೆಯು:
ಬಂದಿ-ಗೃಹ ಕೋಟರದಿ ಹುಲ್ಲ ಮನೆಯು
ಜೋಲುತಿರೆ ಗುಡಿಲೊಳಗೆ ಕಲವಿಂಕ-ಜತೆಯೊಂದು
ದಾಂಪತ್ಯಜೀವನವ ನಡೆಸುತಿಹವು.

ಗಂಡು-ಹಕ್ಕಿಯು ಹಗಲು ಹೊರಗೆಲ್ಲ ಅಲೆದಾಡಿ
ಹಣ್ಣು ಕಾಳನು ಕಡಿದು ತರಲು ಸದಕು,
ಹೆಣ್ಣು ಹರುಷದಿ ಹಾಡ ನುಡಿಸುವೊಲು ಚಿಲಿಪಿಲಿಸೆ
ಸುಮ್ಮಾನದಾ ಮೌನ, ಅದಕು ಇದಕು.

ಅವು ಹೊರೆವ ರಸಬದುಕು ಮರೆಸುತಿರೆ ಎದೆ-ಮಿಡುಕು
ಪಕ್ಷಿಯಾಲೋಕನ್ನದ ನೇಗೆಯಲ್ಲಿ
ಎಳೆ-ವಯದ ಹಲ ಚಿತ್ರ ಹಾಸಾಗಿ ಹೊಕ್ಕಾಗಿ
ಬಿಡುಗಡೆಯ ಬೆಲೆ-ಕಲೆಯ ಅರಿವುದಿಲ್ಲಿ.

ಸಾಕಿ ಸಲುಹಿರೆ ನಾನು ಹಸಿರು ಬಣ್ಣದ ಬೆಕ್ಕು
ಅದು ಊಟ ಸಮಯದಲಿ ಎಡೆಯ ಮೂಸಿ
ಇಟ್ಟ ತುತ್ತನು ತಿಂದು ಕೊಬ್ಬಿ ಕೊತವಾಲನೊಲು
ಮೈಗೊಡವಿ ನಡೆತಹುದು ಬಹು ವಿಲಾಸಿ.

ಹೇಗೊ ಏನೋ ಎಂತೊ ಅದ ಕುರಿತು ನನಗೇಕೊ
ಮಮತೆ ತಾ ಮಿಳಿರುತಿರೆ, ಬಹಳ ನಂಟು.
ಅದನುಳಿದ ಬೋನವದು ನಾಲಗೆಗೆ ಒರಕುವುದು,
ಪ್ರಿಯಜನರ ಜೀವಿಕೆಯ ಬಗೆಯಿದುಂಟು.

ಅಕಟಕಟ ! ಮುಂದೊಂದು ಸಂಜೆ ಮಸಗಿರೆ ಮಂಜು
ಕಂಸನೊಲು ಜಪ್ಪಿಸಿದ ಕಪಟ ಪ್ರಾಣಿ
ವಿಹಗಮಿಥನವನಲ್ಲಿ ಕೂಳ ಬಾಳಕ ಮಾಡಿ
ನುಂಗಿ ನೀರ್ ಕುಡಿದಿಹುದು ಕಾಳ ರಾಣಿ.

ಅಂಗಾಂಗ ಅದರುತಿವೆ ಮನಸು ಮುನಿಸನು ಕಡೆಯೆ,
ಕಣ್ಣು ಕೆಕ್ಕರಿಸಿರಲು ಅತ್ತ ಕಡೆಗೆ.
ಎತ್ತೊ ಓಡಿದೆ ಅಡಗಿ ತೋರಿ ಅಸುರರ ಗರಡಿ,
ಬಲ್ಲವರು ಯಾರದರ ಗುಟ್ಟ ತೊಡುಗೆ ?

ಇರುಳೆಲ್ಲ ಇದೆ ವ್ಯಗ್ರಭೂಮಿಕೆಯು ಭುಗಿಲೆಂದು
ನಿದ್ದೆಯಲಿ ಎದ್ದೆದ್ದು ಕುಣಿಕುಣಿದಿರೆ
ಆ ರುದ್ರಲೀಲೆಯಲಿ ಗಡಣಿಸಿದ ಸ್ಮರಣೆಗಳು
ಶಿವಗಣದ ಪರಿಯೆಂದು ನೆನವೆನರೆರೆ !

ಹಾಕಿದುದೆ ತಾಲವದು ಹಾಡಿದುದೆ ರಾಗವದು,
ಹಾವ-ಭಾವಕೆ ಬಣ್ಣ ಬೇರೆ ಬೇಕೆ ?
ನಾದಪ್ರವೀಣನೊಲು ಅಹರಾತ್ರಿ ಸ್ವರ ಸುರಿವ
ವನಶೃಗಾಲನ ಗಾನ ಇದಕೆ ಸೋಕೆ.

ಇದು ನಿತ್ಯ ಸಿಲವಾಗಿ ಕಾರ್ಗಾಲ ಬಲವಾಗಿ
ಜವಳು ಕಾಣುತೆ ಹೊಲದ ಬೆಳೆಯು ಕೊಳೆತು
ಕೆಡುವ ಮೊದಲಿಗೆ ಹೊಳವು ತಳೆದಂತೆ ಮುಗಿಲೋಳಿ,
ಹರಸಿಹುದು ಘನಕರುಣೆ ಏನೊ ಒಳಿತು.

ಮೂರು ವರುಷದ ಬಳಿಕ ಇಂದೆನ್ನ ಬಿಡುಗಡೆಯು,
ಸುಪ್ತ ಚೇತನೆ ತಾನೆ ಗುಣುಗುಣಿಸಿದೆ.
ಎಳೆ ಮುಖಕೆ ನವ ಕುಕಿಲು ಮುತ್ತನಿಟ್ಟಿಹ ಪರಿಗೆ
ಗುಂಗಾನಮಧು ಅದರ ಒಡಲೊಳಗಿದೆ.

ಕಂಡಿಹೆನು ಕೆಳೆ-ಬಳಗ ಒರೆದಿಹೆನು ಎದೆಮಾತ
‘ ತಾಯ ಮೋಚನಕೆಂದ ಜೀವಮೊಲವು
ವಚನವೀವುದು ಇದೆಕೊ ತವ ಬನದ ಎಳೆವಳ್ಳಿ
ಒಮ್ಮೆ ಹೂ ಸಲಿಸುವುದು–ಇರಲಿ ಗೆಲವು ! ’

ಎರಗಿದೆನು ಅವರ ಹಿರಿ ಮನದ ಮಾಲಿಂಗನಿಗೆ
ಕಣ್ಣೀರಿನಭಿಷೇಕ ತೀರ್ಥ ಕುಡಿದು
ಅದು ಹೃದಯ-ಕಶ್ಮಲವ ತೊಳೆದು ಪುಣ್ಯವ ಕೊಡಲು
ಮರುಮರುಗಿ ತೆರಳಿದೆನು ತಡೆದು ತಡೆದು.”

‡ — ‡ — ‡

“ ಮುನಿಯದಿರಿ ಎಲೆ ಸುಹೃದ ಸಂಚಾರ ಮಾರ್ಗದಲಿ
ಹೊಳೆ ಹಳ್ಳ ದರಿ ಬೆಟ್ಟ ದಾಟಿ ಕೊನೆಗೆ
ಗ್ರಾಮಸೀಮೆಯ ಸೇರಿ ಅಗಸೆಬಾಗಿಲು ದೂರೆ?
ಶ್ರಮವ ಪರಿಹರಿಸೋಣ ಮರಳಿ ಮನೆಗೆ.

ಇದುವೆ ಜೀವನ-ಚರಿತ-ನಾಟಕದ ಕೊನೆಯಂಕ,
ಎರಡು ಗಳಿಗೆಯ ಬಳಿಕ ಮುಖದ ಪರದೆ
ಇಳಿದು ಸಲುವುದು ಪೂಜೆ ರಂಗಮಂಗಲ ಭಜನ,
ಆವರಿಗೆ ತಾಳುವುದು ಕೃಪೆಯ ಬಿಡದೆ.

ಒಡೆದಿರುವ ಕಡೆ ಬೆರಳೆ ಅಡಿ-ಅಡಿಗೆ ಎಡಹುವುದು,
ಗಾಯ ಮಾಯುವ ಬಯಕೆ ಗಾಳಿ ಗೊಂಬೆ.
ಉರಿವ ಕುರವಿನ ಮೇಗೆ ಉಪ್ಪನೆರಚಿದ ಪರಿಗೆ
ಬರಲು ಸಂಕಟ ಜನುಮ ಸಾಕು ಎಂಬೆ.

ತವರೂರ ಪಯಣದೊಳು ಬಳಿಗೊಂಡ ಆ ವೇಗ
ಆವೇಗ ಧ್ವನಿತದಲೆ ಸಾಗಲೇಳೆ.
ಹೊಸಹಳ್ಳಿ ಎದೆ-ನಾಡಿ ಸಲುವಳ್ಳಿಯಲಿ ಆಡಿ
ಮನಸುಮನ ನಡೆಸಿಹುದು ಮೋಹ-ಕೇಳಿ.

ಹಂಗ ಬಲ ಕಟ್ಟಿಹುದು ಕಾಗೆ ಎಡ ಕಟ್ಟಿಹುದು
ಹಾಲಕ್ಕಿ ಕಣಿ ಹೇಳೆ ಕಾದಿರುವುದು.
ಏನೊ ಎಂಥವೊ ಶಕುನ ತೊಡೆಯ ಬರೆ ಒಳ ವೆಸನ
ತರ್ಕ-ನ್ಯಾಯಕೆ ಜಾಗ ಬರಿದೊ ಬರಿದು.

ಬಂಧನದ ಗೃಹದಿಂದ ಬಯಲ ಸೇರುವ ಮುನ್ನ
ಹಲವು ಊಹಾಲತೆಯ ಪುಷ್ಪರಾಸಿ
ಚಪ್ಪರವ ಹೆಣೆಸಿಹವು ಪಥಶ್ರಮವ ತಣಿಸಿಹವು
ಮೊಗಬನದಿ ನಗೆ ಗಂಧ ಗಾಳಿ ಬೀಸಿ.

ಏನು ಕನಸಿನ ಕಥೆಯು ನನಸು ಭೂಮಿಯ ಬದುಕೆ ?
ಕರಿ ತಿರುಕಿ ಅರಸನನು ವರಿಸಲುಂಟೆ ?
ಸಂತೆಯೊಳ ಕುರುಡನೊಲು ಬಯಕೆ ಬಾಯ್ಬಿಡುತಿರಲು
ಬಹುದು ಸವಕಳಿ ನಾಣ್ಯದಂಥ ಗಂಟೆ !

ಲಾಕ್ಷಣಿಕ ಹೆಣೆವಂತೆ ಮಲಕು ಮಾತಿನ ಹಾರ,
ತೊಡಕ ಮಾಡಲದೇಕೆ ಬಿಚ್ಚುಗತೆಯ ?
ಗುಡ್ಡವಿಳಿದೊಗ್ಗಯ್ಯ ಕೊಂಕಣವ ಸುತ್ತರಿದು
ಪೈಲಾರ ಸೇರುವುದೆ ಬಿಟ್ಟು ಮತಿಯ ?

ಹೆಸರ ಕಡೆಯಲು ಕೂಡ ಉಸಿರು ತಡೆಯುತಲಿಹುದು;
ಕೆಸರಿನಲಿ ಕಲ್ಲೊಂದ ಎಸೆಯಲೊಡನೆ
ಮಣ್ಣು ಮಸರೇ ಮೈಗೆ ಓಕಳಿಯ ಚಿಮ್ಮುವುದು,
ಅಂತಿರುವ ಕೊಳೆ-ಕಥೆಯ ಹಿಗ್ಗಲಿಪೆನೆ ?

ಹಕ್ಕಲಿನ ಬದು ಕಾವ ಆನೆ ಬೇಲಿಯೆ ಎದ್ದು
ಹೀಚು ಮಿಡಿ ಹಸರಾಣಿ ಮೇಯುತಿರಲು
ಮಳಲ ಕೊಳದಲಿ ನೀರ ಶೇಖರಿಸ ಹೋದಂತೆ
ತೋಟಿಗನ ಸಾಹಸವು—ಇಲ್ಲ ಹುರುಳು.

ತಾಯ ಬೇಸೆಯ ಹಬ್ಬ ಬಡತನಕೆ ಸವಿಯೂಟ,
ಬೇತಾಳಕವುತಣವ ಕೊಡಲೆ ಬೇಕೆ ?
ಆಯಿತಾಹುತಿ ಹವಿಸು ಹಸಿದ ವಿಧಿಗೆಡೆ ಇನಿಸು,
ತಂಗಿ ಮೈಮೀಸಲನು ಮುರಿದಳಾಕೆ !

ಹರೆಯ ಚೆಲುವುಗಳೆರಡು ಚಿತ್ತಜನ ವರವಣ್ಣ
ಮುಕ್ಕಣ್ಣನುರಿಗಣ್ಣು ತಣಿಯಬಹುದು.
ಆದರಾ ರತಿ-ರೀತಿ ಸೋತ ಶೀಲದ ಜೀತ,
ಪ್ರೀತಿ-ನೀತಿಯ ಮಾತು ಇಲ್ಲಿ ಬರದು.

ಲಲಿತ ಲಲಿತಾ ಎನುವ ಲಾಲಿತ್ಯರಸಲಹರಿ
ಕೊಳೆತ ಕಿತ್ತಳೆ ಸೊನೆಯ ಕಂಪಿನಂತೆ
ಹೊಲೆಗಂಪ ಕಾರಿಹುದು, ಹಾವಸೆಗೆ ಜಾರಿಹುದು
ಅವಳ ಜಿಲೆಪೆಣ್-ಬಾಳು ಮಲೆಯಲಿಂತೆ.

ಅಮಮ ಗಗನಾಂಗಣದ ಬೆಂಕಿ ಪಿಂಡಗಳೆನಿತೊ
ಭೊಂಕನೆಯೆ ಎದೆಗಿಳಿಯೆ ಲಂಕೆಯಾಗಿ
ಜೀವ ದಹಿಸಿದೆ ಮತ್ತೆ ಎದ್ದ ಸುಂಟರಗಾಳಿ
ಎತ್ತೊ ಅಪ್ಪಳಿಸಿಹುದು ಮೆದುಳ ತೂಗಿ.

ಅಹುದು ಜ್ವಾಲಾಮುಖಿಯು ತನುಮನದ ಜಗದೊಳಗೆ,
ಇದು ಪ್ರಲಯ ಪ್ರಧನಲಯ ಒಡೆದು ಸೃಷ್ಟಿ.
ಹಾರಿತೆಲ್ಲೋ ಪ್ರಾಣ ನರನರವು ನಿತ್ರಾಣ,
ವಾಸನಾಜೀವಿಗಳಿಗೆಲ್ಲಿ ತುಷ್ಟಿ?

ತಲೆಯೆತ್ತಿ ನೋಡುವೆನೆ ಅಂಗಣದ ಹುಣಸೆ ಮರ
ಕಪಿಯು ಕೊರಲೊಳಗಿಂದ ಗಹಗಹಿಸಿದೆ.
ಹಾ ಎನುವ ಜೀವ ಹರಿ ವಾಯಸದ ಚುಂಚಿನಲಿ
ಭಣಗುಡುವ ರಣವಾದ್ಯ ರೌರವಿಸಿದೆ.

ತಾಳಲೆಂತಿದ ಪೆಟ್ಟ ಎದೆ ಮೆಟ್ಟ ನಿಂತಿರುವ
ಹಟವ ಕೊಲ್ಲಟಗಿತ್ತಿ ಲಾಗ ಯೋಗ?
ಸಾಕು ನೂಗುವ ಬಾಳು, ಆಗೆ ಹೋಗಲಿ ಹೊಳು.
ತಂಗಿ-ಮೊಗ ಮೈಲಿಗೆಯ ಹೊದ್ದ ಭಾಗ!

ಅರಿತಿಂತು ಮರಣಕ್ಕೆ ಮೊರೆ ಬಿದ್ದು ಹೊಂಟಿಹೆನು
ಕೆಳಗೆ ಕೇವಗೆ-ಪೆಳೆಯ ಕೊಳ್ಳದತ್ತ,
ನಡುವೆ ತಡವಿತದೇನೊ, ಹೋಮದಲಿ ಘೃತ ಸುರಿಯೆ
ಕಲಸು-ಮಲಸನು ಮಾಡಿ ಚಿತ್ತವೊತ್ತ.

ಅನತಿದೂರದ ನೋಟ, ನೀಳ ಲೋಚನ-ಬೇಟ,
ನೀಲೆ ತೋಳಲಿ ಮಗುವ ತಬ್ಬಿ ಹಿಡಿದು
ಆಂಜನೇಯನ ಗುಡಿಯ ಅಂಗಾರ ಹಣೆಗೊತ್ತಿ
ಮರು ತೆರಳೆ ಕಳಚಿತೆದೆ ಗೊನೆಯು ಮುರಿದು.

ಏನಕಟ ಮೊನೆಗತ್ತಿ ಮೆತ್ತಗೆಯೆ ಕುತ್ತುತಿದೆ,
ಬೆಕ್ಕು ಮೂಷಕ ಕೊಲುವ ಪರಿಯೆ ಅಲಲ!
ಈ ಅಮಾನುಷ ವೃತ್ತಿ ಕೂರಿಸಿದೆ ಕೈಕಟ್ಟಿ;
ಯಾರು? ಯಾರಲಿ ದೂರು? ನಾನೆ ದುರುಳ.

ಈರ್ಷೆಯದು ಸರಿಯಹುದೆ ಅವಳ ಜೀವನ ತೊಡವು
ಒಡೆದು ಹುಡಿಗೂಡಲದು ಎಂದು ಬಯಸೆ?
ನಿರಪರಾಧಿಯು ನೀಲೆ, ನಂಬಿದಳು ಹಂಬಿದಳು;
ನರಿ-ಬಾಳ ನಾ ಬಳಸೆ ಆಯ್ತು ವಲಸೆ.

‘ ಅಹಮಿದಂ ಅಹಮದಂ ’ ಪಾತಕಿಯ ಬಹುರೂಪ
ರೂವಾರಿ ಕಳಸವದು ಆತ್ಮಹತ್ಯ.
ಇರಲದುವೆ ದುರ್ಬಲಗೆ ಬಲದ ಬೆಂಗಾವಲೊಲು,
ಭಗ್ನಹೃದಯಕೆ ಬಾಳಿದೇನಗತ್ಯ?

ಸಂಜೆ ಮಂಜಿನ ಕಡಲ ನಂಜಿನಲಿ ಈಜುತಿರೆ
ಅಂಜನದ ರಂಜನೆಯು ರಮಿಸಬಹುದೆ?
ಪಡುವಲಿನ ಕೆಂಬಣ್ಣ ಶವದಹನದುರಿಯಣ್ಣ,
ಚಿತೆಯ ಹಾರಿದ ಸತಿಯ ಹುಡುಕಬಹುದೆ?

ಅದೊ ನಿಶಾಸುರ ತನ್ನ ದವಡೆ ದಂತವ ಮಸೆದು
ಇಡಿ ದೇಹ ಒಡಿ ನುತ್ತ ಎಸಗಬಹನು.
ಅರೆರೆ ರಾತ್ರಿಯ ರಮಣಿ ವ್ಯಭಿಚಾರ-ಬಾಳಿಕೆಗೆ
ಸೆರಗ ತಲೆ ಬೀಸಿಹಳು ಎನ್ನಲೇನು?

ಕತ್ತಲೆಯ ಮುತ್ತುಗಳು ಕಿಡಿಪಂಜ ನತ್ತುಗಳು,
ತಾರಗೆಯ ಮಣಿಹಾರ ಕೊರಳ ಭಾರ.
ಬಹ ನೃತ್ಯ ಸಂಗೀತ ಹರಿಯೆ ಓತಪ್ರೋತ,
ಸಾರ್ದ ಮಾರ್ದನಿಯಿದೆಕೊ ಸನಿಹ ತೀರ!

ಏಸೊ ರಣಹದ್ದುಗಳು ಜಿದ್ದಿನಲಿ ಗರಿ ಬೀಸಿ
ಭಕ್ಷಣಕೆ ಬಾಯ್ದೆರೆದು ಹಾರಿ ಬಹವು,
ಎನೆ ಬಂತು ಕಾಳ-ಛವಿ ನದಿಯ ಮಹಪೂರದೊಲು
ತೆರೆಗಳೇರಾಟದಲಿ ಇರುಳ ಹರವು.

ಹರದಾರಿ ಕ್ರಮಿಸಿದೆನು ಹರ ಹರಾ ಎನ್ನುತ್ತ;
ಹೆಂಟೆ ಕಂಟೆಯೊ ಹುಳವು ಹುಪ್ಪಡಿಗಳ
ಜೀವನವ ಒದೆವಂತೆ ಕೆಳತುಳಿದು ಸಾಗಿರಲು
ಹೆದರಿ ಅದಿರಲು ಉಂಟೆ ಭೀಮ-ತರಳ?

ನಾನೆ ಮುನ್ನಡೆದಿಹೆನೊ ಮಡುವೆ ಅಡಿಯ್ಯಾಡಿಸಿತೊ ?
ತಡೆದಿಹುದು ಅಂತಕನ ಲೋಕದಗಸೆ.
ಅಹೊ ಸ್ಮಶಾನದ ಮೋನ ಸ್ವಾಗತವ ಸಲ್ಲಿಸಿರೆ
ಒಂದಿಸಿದೆ ಪ್ರಣಮಿಸಲು ಕೈಯ ಬೊಗಸೆ.

' ಇನ್ನೇನು ಇದೆ ಕೊನೆಯ ಮಣ್ಣ ಚಿಟ್ಟೆಯು ' ಎಂದು
ಸಕಲ ಅಣುರೇಣುಗಳ ನಾ ನೆನೆದಿರೆ
ಗತಕಾಲ ಚಲ-ಚಿತ್ರ ಜಲಮರೀಚಿಕೆಯಂತೆ
ಕಾಣೆ ಕಾಲ್ ಕುಸಿದಿಹವು ತಿಳಿವಳಿದಿರೆ.

ಜೀವ ಜೋಪಾನಕ್ಕೆ ಚೇಳು ಒರಳನು ಸೇರೆ
ಒನಕೆ ಅಲ್ಲಿಯು ಕಾದು ಕುಳಿತಿರುವೊಲು
ಸಾವ ಸೋಪಾನಗಳ ಅರಸೆ ಕಂಗೆಡುತಿರಲು
ಬಭ್ರಮಿಸಿ ಬಂದಿಹುದು ಏನೊ ನೆಳಲು.

ಕಾಳ ಕಳೆ ಹಿಂಗಿಹುದು, ಜ್ಯೋತಿ ಜಂಗಮಿಸಿಹುದು,
ಬೆಳಕ ಮಳೆ ಇಳಿದಂತೆ ಬಳುವಳಿಯಿದು.
ಕಿಂಪುರುಷ ಕಿನ್ನರರೊ, ಗಂಧರ್ವ ಲೋಕವೋ,
ವೇತಾಳ ಮಾಯೆಯೊ ? ಹೇಳಬರದು.

ಏನು ಬೆಳಕಿಗು ಕೂಡ ಬಾಯದನಿ-ಬಲುಹುಂಟೆ ?
ಇಂಚರವ ಸೂಲಿಸಿತಲ ಅಚ್ಚರಿಯೆನೆ ?
ತಾನು ಕಾರಣ-ಪುರುಷ ? ಎನ್ನ ಸರಿ ಅರಿತವನು ?
ತನ್ನ ಕೋಲಸು ಮಾಡಿ ಕುಣಿಸುತಿಹನೆ ?

ಏನು ಹೆಂಗಳೆಯಂತೆ ಮುಳಮುಳನೆ ಅಳಲಿಂತೆ ?
ಮೊದಲಿನಾಣೆಯು ಶಪಥ ಹುಸಿಯೆ ತಾನು ?
ಅಬಲೆ ರಮಣಿಯರೆನಿತೊ ರಕ್ತತಿಲಕವ ಧರಿಸಿ
ಬವರದಲಿ ಬಲಿಗೊಡಲು ಎನ್ನದೇನು ?

ಅಹಹ ಎಂತಹ ಭಾವಜ್ಯೋತಿರಸದನುಭವವು
ಮನ ಮೆದುಳು ದ್ರವವಾಗಿ ಹರಿಯುತಿರಲು ?
ತೆರಳಿಹವು ದನಿ ನೆಳಲು ಹಾಸ-ಉಪಹಾಸಗಳು,
ಮತ್ತೆ ಬಂಧನ, ಬಯಕೆ ಸಂಕಲೆಗಳು.

ಇದು ಸ್ವಪ್ನಸಾಗರವೊ ನಿದ್ದೆಯೊಳ ಜಾಗರವೊ
ಹುಚ್ಚಿಸುನ್ಮಾದಭಯಭಂಗಿಯೆನಲೆ ?
ಮಗುವನಾಡಿಸೆ ತಿರೆಯ ತೊಟ್ಟಿಲವೆ ತೂಗುತಿಪೆ !
ಜಂಪಿಣಿಕಿ ಜಾರುತಿರೆ ಹೊಸ ತೆರವಲೆ.

ಮುಂದೆ ಮೂಡಲ ಬಾನ ಚೆಂದ ಚೆಲುವನೆ ನೋಡ,
ಬೆಳಗಿನರುಣೋದಯದ ಸಮಯ ಸನಿಹ.
ತಂಗಾಳಿ ತೆಳುವಾಗಿ ಗುಂಗಾನ ತೀವಿ ಬರೆ
ಅಂಗಾಂಗಕಮೃತವನೆ ಸಿಂಚಿಸಿತಹ !

ಅಲ್ಲೊಂದು ಇಲ್ಲೊಂದು ಸಲ್ಲಲಿತ ನಕ್ಷತ್ರ-
ನೇತ್ರಪಲ್ಲವದಿಂದ ಲಲ್ಲೆ ಕೊನರೆ
ಉಲ್ಲಸವು ಉದಿಸಿಹುದು ಜೀವ ಕಾಸಾರದಲಿ;
ತರತರಂಗದಿ ಸಾಂಗ ಸಿಂಗರ ನೆರೆ !

ಕೇದಗೆಯ ಪೆಳೆ ಕೂಡ ಕಾತರವ ತೋರುವ್ರೋಲು
ಕಮ್ಮಲರೆ ಕುಡಿಯಾಗಿ ನಳನಳಿಸಿರೆ
ಒಳ ಪರಾಗವ ನಾಗ ಕುಡಿಯೆ ಮಾಗಿವ ಉಸಿರೆ
ಹಗುರಾಗಿ ಹರವುತಿದೆ ಗಂಧವ್ರೊಸರೆ.

ಇಳಿದಿದೋ ಇಬ್ಬನಿಯ ಆನಂದರಸ ಬಿಂದು,
ಜೀವಕಾಪ್ಯಾಯನವ್ರೊ ಏನೊ ಕಾಣೆ.
ಮಹ-ಅಮಾವಾಸ್ಯೆ-ನಿಶೆ ನಿಚ್ಚಳಿಸೆ ನಿಲಯದಲಿ
ಅಹ ರಮ್ಯರಾಗನೊರೆ-ದೇವವೀಣೆ !

ಕಲರವದ ಕೊಳಲ ದನಿ ನವಜೀವ ಹಸಿಸಿರಲು
ಎಚ್ಚರಿದ ಹಸುಳೆಯೊಲು ಕಣ್ದೆರೆದೆನು.
ಬಲ ಚಪಲ ಚೇತನೆಯು ಗಂಭೀರ-ಗುಣಾಧುಸಿಯು
ಮೈ ಪುಲಕವೆಸಗುತಿರೆ ಹುರಿಯೊಡೆದೆನು.

ಹಬ್ಬವದೊ ಹೊನ್-ಬುಗ್ಗೆ, ದಿನಕರನ ಘನ ಕೃಪೆಯು !
ಭೂಮಾತೆ-ಭಂಡಾರ ಬಸಿರ ತಳೆದು
ಮೈವಿಡಿದು ಚೆಲ್ವೆಳಕು ತೊಳಗಿಹುದು ಮನ್ಮನಕು !
ಸಾಂಜಲೀಕೃತನಾದೆ ಶಿರವ ಮಣಿದು.

ಸೋದರರ ಸಾವರಿಸಿ, ಕಂಬನಿಯ ಸೀವ್ರೊರಿಸಿ.
ಇದು ಹರ್ಷ-ಹಾಲೆಂದು ಹಂಬಲಿಕೆಯೆ ?
ಜಗ-ದಿಗಂಗನೆ ಮೊಗದ ಮೇಲುದವ ಓಸರಿಸಿ
ತಾಯ್ತನವ ಕರುಣಿಸಿರೆ, ಹರಕೆ ಮರೆಯೆ.

ಏನಣ್ಣ ನಾನು ನಾನೇ ಎಂಬ ಹಮ್ಮು ತಾ
ಓಂಜುತಿದೆ ಮುಂಜಾವ ಮುಂಜಿನಂತೆ.
ನಾನು ಬಣ್ಣದ ಬೊಂಬೆ, ಸೂತ್ರನಾಯಕನೆಲ್ಲೊ
ಆಟುಗೆಯ ಆಡಿಸುವ—ಅಲ್ಲಿ ಸಿಂತೆ!

ಅವಸಿತ್ತ ಆಪ್ಪಣೆಯು ಅವಮಾನವೆಸಗುವುದೆ?
ಹಲ ಬಕಾಸುರರಿಲ್ಲಿ ನಾಡಿನೊಳಗೆ
ಅಧಿಕಾರ-ಮದ ಕುಡಿದು ಕೊಬ್ಬಿ ಕುಳಿತಿರಲವುವು
ಕರವಾಳ ಸೇರುವುದೆ ಬರಿದೆ ಒರೆಗೆ?

ಜಾತಿಮತಗಳ ವೈರ, ಘಾತುಕರ ಕಡು ಸ್ವೈರ
ಕ್ರೌರ್ಯ ಕಿಂಕಿಣಿಸಿರಲು ಕಂಡೆ ಕಂಡೆ.
ಎಲೆಲೆ ಈ ಬೀಜಗಳ ಬಿತ್ತಿ ಬೆಳೆವವರವರೆ
ಸಿತ್ಯ ಸಂಕೋಲೆ ಸವು–ಎಂದೆ ಎಂದೆ.

ಹರಿಯಲಾ ಸಂಕೋಲೆ ಮುಸೆದಿಪ್ಪ ಎನ್ನಲಗ
ಪರಶುರಾಮನ ವರದ ಹಸ್ತವಾಂತು.
ದ್ರೋಹಿಗಳ ನೆರೆ ಹೊಡೆಯೆ ದ್ರೋಹಕ್ಕೆ ಗುರಿಯಾದೆ
ಸಂದುದಿಲ್ಲಿಗೆ ಎನ್ನ ಕಥೆಯ ಕಂತು!"

* * * *

"ಬಂಧು, ನಾನಂದೊಮ್ಮೆ ಮೊದಲ ದಿನ ಸಂಧಿಸಿರೆ
ಬಂದ ಕಾರಣ ಪೂರ್ಣ ಬಿತ್ತರಿಸಿಹೆ.
ಹಾಡಿಪ್ಪೆ ಹಾಡುತಿಹ ಕಿಸುವಾಯ ದಾಸನೊಲು
ಇಂದದನೆ ಆಡಲಿಯ? ಸಾಕು ತಡೆವೆ.

ಅದೊ ಕೇಳಿ ದಾಳಿಡುವ ಕೋಟಿ-ಘಂಟಾನಾದ,
ಹೆಕ್ಕಳಿಸಿ ಒರಲುತಿದೆ ಚರಮ ವೇದ.
ಹಗಲು ತಳುಕಿದೆ ನೆಲವ; ಅಹುದು ಇದೆ ಕೊನೆಯೊಲವ
ಅಮರ-ನುಡಿ; ಮನ್ನಿಸಿರಿ; ಇರಲಿ ಮೋದ!

ಮಾತಾಯಿ ಎಲ್ಲಮ್ಮ ಎರಗುವೆನು ನಲ್ಲಮ್ಮ
ಹರಸವ್ವ ಭಾರತಿಯೆ ನಿನ್ನ ಮಗುವ.
ನಿನ್ನ ದುರ್ದಿನ-ದೆಸೆಗೆ ಮಾರ್ದನಿಯ ಕೊಡುತಿರುವೆ,
ಈ ಅನಂತದಿ ಕರಗಿ ಪಡೆದು ನೆರವ.

ನಮೋ ನಮೋ ನಮೋ ಎಂಬೆ ಸೋದರವರರ,
ಬಾಳ ಕಾಲಕೂಟವಿಷವ ಕುಡಿದಿಹ ಹರರ,
ಹರಿಯದಿರಲಿ ಮರೆಯದಿರಲಿ ಒಲವ ಬಂಧನ
ಪ್ರೇಮರಸದಿ ತೊಳೆದ ಅಡಿಗೆ ಇದೋ ವಂದನ!"



ಸವೆದೆಯಾ ಓ ಅಣ್ಣ ಕವನ-ಕಥೆ-ಮಧುವನ್ನ?
ಏನು ಸುಮ್ಮನೆ ಉಳಿದೆ? ಬಾಷ್ಪವೇಕೆ?
ಬಲ್ಲೆ ನಾನೆಲೆ ರಸಿಕ, ನಿನ್ನ ಮನದೊಳ ಪುಳಕ;
ಎದೆಯ ಕಡೆತಕೆ ಬೇರೆ ಭಾಷೆ ಬೇಕೆ?

ಶೋಕವೇತಕೆ ಗೆಳೆಯ ಚೆಲು-ಗೀತ ಬಳಿಯಿರಲು?
ದೈವಕುವರನು ಚೆನ್ನ ಸಾವನೆಂದೆ?
ಯಾರು ಅಮರರು ಹೇಳು, ಪಾರ್ಥಿವರ ಲೋಕದಲಿ?
ಮನುಜ ಚಿರ, ಅವನ ಕೃತಿ ನೆನವಿನಿಂದೆ.

‘ ಜಗದ ಕಾಲದ ಕಡಲ ಕೊನೆಯಿರದ ತೀರದಲಿ,
ಚೆನ್ನನನುಭವ, ಮಳಲ ಕಣವು ’ ಇಂತೆ
ನುಡಿವ ತಿಳಿವದು ದಿಟವು; ಆದರಾ ಕಣದುಸಿರು
ಬಯಲ ತುಂಬಲು ಬಹುದು ಗಾಳಿಯಂತೆ. ೧೪೮೨

ಅವನ ಚರಿತದ ತಿರುಳು ಜನಪದದ ಸಲೆ ಹುರುಳು
ಮಿರುಗುವುದು ಸರಸೋಕ್ತಿ ಶೋಭೆಯಿಂದ.
‘ ಕೋಶದಾಚೆಯ ಮಾತು; ದೋಷಯುತ ’ ಎಂದೆನವೆ
ಬರೆದು ಕೊಳೆ ಇಹುದಿಲ್ಲಿ ಸುಪ್ರಬಂಧ.

ಬಾ ಗೆಳೆಯ ಸಾಗೋಣ ಮನೆಮನೆಗೆ ಹೋಗೋಣ
ಹಾಡೋಣ ಹರಸೋಣ ಚೆನ್ನನೊಲವ.
ಅವನ ಕಥೆ ಸಾವಿರದ ಬನ್ನಗಳ ಪ್ರತಿಯಾಗಿ
ಇರಲು ಬಯಸುವ ಅವಗೆ ದಿವ್ಯ ಗೆಲವ. ೧೪೮೮



**ಓಂ ಸ್ವಸ್ತಿ !**

# ಮುಂಬೆಳಗು

( ಇದೇ ಬರೆಹಗಾರರ ಪ್ರಕಟಿತ ಕವನ ಸಂಕಲನವೊಂದು )

'ಪ್ರಸ್ತುತದೊಳೊಗೆದ ಮುಂಬೆಳಗು' ಅವರ ಕಾವ್ಯ-ವಿನಾಯಕನ 'ಅಮಲ ದಂತದ ಗಭಸ್ತಿ'. ಇನ್ನು ಮುಂದಿನ ಕೃತಿಗಳಲ್ಲಿ 'ಭಾಳವಿನ್ಯಸ್ತ ಸಿಂದೂರ'ದ ಪ್ರಭಾವವೂ ಅದಕ್ಕೂ ಮುಂದೆ ಆ 'ಮಸ್ತಕದ ಮಣಿ-ಮುಕುಟ'ವಾಗಬಲ್ಲ ಕೃತಿಯ ಪ್ರಕಾಶವೂ ಸ್ಫುರಿಯಲಿರಲೆಂಬ ಭರವಸೆಯನ್ನು ಕೊಡುತ್ತಿವೆ............

ವಿವಿಧ ವಿಲಾಸದಿಂದ ಕಟ್ಟಿರುವ ಈ ಇಪ್ಪತ್ತೆಂಟು ಕವನಗಳ ಸಿವುಡಿನಲ್ಲಿ ಅಂತರಂಗವನ್ನು ಕೆದಕುವ, ಚಿತ್ತಕ್ಕೆ ಹರ್ಷವನ್ನುಂಟು ಮಾಡುವ, ಮನವನ್ನು ಕಲ್ಲೋಲಗೊಳಿಸುವ, ಅಹಂಕಾರವನ್ನು ಚುಚ್ಚುವ, ಸೀಳುವ ಅನೇಕ ಶಸ್ತ್ರಾಸ್ತ್ರಗಳಿವೆ. 'ಎಚ್ಚರಿಯೊ ತಂದೆ' 'ಜೋಗದ ಯೋಗ' 'ಬಾಳ ಹಕ್ಕಿ' ಮೊದಲಾದವುಗಳಲ್ಲಿ ಕಂಡುಬರುವ ಛಂದೋವಿಲಾಸವೂ, ಸಾಮಾನ್ಯವಾಗಿ ಎಲ್ಲ ಕವನಗಳಲ್ಲಿಯೂ ಕಂಡುಬರುವ ಪದಗುಂಫನದ ರೀತಿಯೂ ಬಂಧನವನ್ನು ಮೀರಿ ವಿಸಟಂಬರಿಯುವ ಭಾವೋದ್ರೇಕವೂ, ವಕ್ರವಿಚಾರಸರಣಿಯೂ ಈ ಕಾವ್ಯಸಂಗ್ರಹದ ಬಗ್ಗೆ ಪ್ರಥಮದರ್ಶನದಲ್ಲಿಯೂ ಸದಭಿಪ್ರಾಯವನ್ನುಂಟು ಮಾಡುವವು............

ಕವಿಯ ಶೈಲಿಯ ಮಾಯೆಯಿಂದ, ತಾತ್ಕಾಲಿಕ ಜೀವನದೊಡನಿರುವ ಸಾಮರಸ್ಯದಿಂದ, ಸಾಮಾನ್ಯವಾಗಿ ಕವನಗಳಲ್ಲಿ ಒಂದು ಆಕರ್ಷಣೆಯು ಸಹಜವಾಗಿ ಬರಬಹುದಾದರೂ, ಕವಿಗೂ ಕಾವ್ಯಕ್ಕೂ ಸೌಭಾಗ್ಯವನ್ನು ತರುವ ಶಕ್ತಿಯು ಇತರರಲ್ಲಿಯೂ ಒಂದು ದೃಷ್ಟಿಯನ್ನು ಉನ್ಮೀಲಿತವಾಗಿ ಮಾಡಬಲ್ಲ ಅವನ ಜೀವಂತ ದರ್ಶನ ಸಾಮರ್ಥ್ಯದಲ್ಲಿದೆ. ಒಂದು ಜನ, ಒಂದು ಭಾಷೆ ನವಜನ್ಮವನ್ನು ಪಡೆದು ಹೊಸ ಹಾದಿಯಲ್ಲಿ ಕಾಲಿಡುವಾಗ ಅನೇಕ ಪೂತಹೃದಯಗಳು ತಮ್ಮ ಭಾವಜಲವನ್ನು ಭಾಷೆಗೆ ಎರೆದು ಅದರಲ್ಲಿ ಅಪೂರ್ವವಾದ ಕಳೆಯನ್ನುಂಟು ಮಾಡಬೇಕಾಗುತ್ತದೆ.....ಅಂಥ ಸೌಭಾಗ್ಯದ ಸುಳಿವು ಇಲ್ಲಿಯ ಕವನಗಳಲ್ಲಿಯೂ ತಲೆಯೆತ್ತಿದೆ............

—ದ. ರಾ. ಬೇಂದ್ರೆ ( ಮುನ್ನುಡಿಯಿಂದ )

# ಒಪ್ಪೋಲೆ

| ಸಾಲಿನ ಸಂಖ್ಯೆ | ತಪ್ಪು | ಒಪ್ಪು |
|---|---|---|
| ೩೯ | ಶುದ್ಧಿಕಲಿಸು | ಶುದ್ಧೀಕರಿಸು |
| ೧೨೧ | ಸುಡಿವನ್ನ | ಸುಡಿವನಕ |
| ೧೭೫ | ಡುಗುಡ | ದುಗುಡ |
| ೨೪೫ | ರೌಶಿಮೆಯ | ರೇಶಿಮೆಯ |
| ೨೪೭ | ಮಾಡಿಡ | ಮಾಡಿದ |
| ೨೭೯ | ತಲುವಲಿ | ತಸುವಲಿ |
| ೨೯೨ | ಕೊಬ್ಬುಪುದು | ಕೊಬ್ಬುವುದು |
| ೨೯೪ | ತಿರುಗುತಿಹುಹು | ತಿರುಗುತಿಹುದು |
| ೩೯೯ | ಅಪೋಶನವ | ಆಪೋಶನವ |
| ೪೪೬ | ಶ್ರುತಿ | ಶೃತಿ |
| ೬೮೯ | ಸ್ನೇಹದೂತ್ಯ | ಸ್ನೇಹದೌತ್ಯ |
| ೭೭೧ | ಪಂಟಪ | ಮಂಟಪ |
| ೮೧೯ | ಡಗೆ | ಧಗೆ |
| ೧೧೦೪ | ಗಾಗಬಾರದು | ಗಾಗಬರದು |
| ೧೨೩೯ | ವಿಹಗಮಿಥನ | ವಿಹಗಮಿಥುನ |
| ೧೩೩೫ | ಹೊಳು | ಹೋಳು |
| ೧೩೪೪ | ತೆದೆ ಗೊನೆ | ತೆದೆಗೊನೆ |
| ೧೩೬೨ | ನುತ್ತ | ತುತ್ತ |
| ೧೩೬೪ | ತಲೆ | ಬಲೆ |

